ಡಾ॥ ವಿಜಯ ಸುಬ್ಬರಾಜ್

# ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ

(ಪ್ರವಾಸ ಕಥನ)



# ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ

## (ಪ್ರವಾಸ ಕಥನ)

ಡಾ॥ ವಿಜಯಾಸುಬ್ಬರಾಜ್

ಅಭಿಲಾಷ್ ಮುಂಡಾಲ ಪ್ರಕಾಶನ
ನಂ.46/113, ವಿನಾಯಕನಗರ
ಇಮ್ಮಡಿಹಳ್ಳಿ ಅಂಚೆ, ಬೆಂಗಳೂರು - 66

# ನನ್ನ ಮಾತು

ಇದು ನನ್ನ ಮೊಟ್ಟ ಮೊದಲ ಪ್ರವಾಸ ಕಥನ. ಸುಮಾರು ಹತ್ತು ವರುಷಗಳ ಹಿಂದೆ ನನ್ನ ಕಾಲೇಜಿನ ಪ್ರಾಣಿ ಶಾಸ್ತ್ರ ವಿಭಾಗದಿಂದ ಪ್ರಾಣಿ ಶಾಸ್ತ್ರ ವಿದ್ಯಾರ್ಥಿಗಳಿಗಾಗಿ ಶೈಕ್ಷಣಿಕ ಪ್ರವಾಸವನ್ನು ಏರ್ಪಡಿಸಲಾಗಿತ್ತು. ಅಂಡಮಾನ ಸಮುದ್ರ ಸಂಪತ್ತಿನ ಆಗರ. ಅನೇಕ ಸಮುದ್ರ ಜೀವಿಗಳ ಮಾದರಿಗಳು, ಹವಳ ಬಳ್ಳಿಗಳು, ಶಂಕಗಳು, ಕಪ್ಪೆ ಚಿಪ್ಪುಗಳು - ಹೀಗೆ ಬೇಕಾದ್ದೆಲ್ಲವನ್ನೂ ಸಂಗ್ರಹಿಸುವುದಕ್ಕೆ ಅವಕಾಶವಿರುವ ದ್ವೀಪ ಅದು. ನಾನು ಸಾಹಿತ್ಯದ ಆಧ್ಯಾಪಕಿಯಾಗಿದ್ದರೂ ಅವುಗಳ ಅಧ್ಯಯನದಲ್ಲಿ ಆಸಕ್ತಿ ತಳೆದಿದ್ದ ಕಾರಣ ಮತ್ತು ಆ ದ್ವೀಪ ನಿಸರ್ಗ ಸೌಂದರ್ಯಧಾಮವೆನಿಸಿದ್ದರಿಂದ ಭೂಲೋಕದ ಸ್ವರ್ಗವೆಂಬ ನಂಬಿಕೆಯಿಂದ ಅದನ್ನು ನೋಡಲೇಬೇಕೆಂದು ಹಟ ತೊಟಿದ್ದೆ. ಜೊತೆಗೆ ಸಮುದ್ರ ಪ್ರಯಾಣದ ಅನುಭವದ ರೋಮಾಂಚನಕ್ಕಾಗಿ ನಾನೂ ಅವರೊಂದಿಗೆ ಹೊರಟೆ. ಆ ಅವಧಿಯ ನನ್ನ ಅನುಭವಗಳು ನನಗೆ ಅಮೂಲ್ಯವೆನಿಸಿ ದಾಖಲೆಂಯಾಗಲು ಯೋಗ್ಯವೆನಿಸಿ ಈ ಪ್ರವಾಸ ಕಥನವನ್ನು ಹಿಂತಿರುಗಿದ ಕೂಡಲೇ ಬರೆದೆ. ಬಿಡಿ ಲೇಖನಗಳಾಗಿ ಒಂದೆರಡು ಕಡೆ ಪ್ರಕಟಿಸಿದೆ. ಒಂದು ಸುದೀರ್ಘ ಲೇಖನಕ್ಕೆ ಬಹುಮಾನವೂ ಬಂತು. ನನಗೆ ಇದನ್ನು ವಿಸ್ತರಿಸಿ ಕೆಲವು ವೈಯುಕ್ತಿಕ ಅನುಭೂತಿಗಳನ್ನೂ ಸೇರಿಸಿ ವಿದ್ಯಾರ್ಥಿಗಳ ಜೊತೆಗಿನ ಪ್ರವಾಸದ ಅನುಭವ. ಮಾಮೂಲಿ ಪ್ರವಸದ ಅನುಭವಕ್ಕಿಂತ ಭಿನ್ನವೆನಿಸಿ ನನಗೆ ಬರೆಯಲು ಪ್ರೇರಣೆಯಾಯಿತು. ಇತಿಹಾಸ, ಭೂಗೋಳ ಇತ್ಯಾದಿ ಅನ್ಯ ವಿವರಗಳಿಗೆ ಹೆಚ್ಚಿನ ಒತ್ತುಕೊಡದೆ ಅಗತ್ಯಕ್ಕೆಷ್ಟು ಬೇಕೋ ಅಷ್ಟನ್ನು ಮಾತ್ರವೇ ಬಳಸಿಕೊಂಡು ಈ ಕೃತಿಯನ್ನು ಸಿದ್ಧಪಡಿಸಿದ್ದೇನೆ ಮತ್ತು ಈಗ ಸಹೃದಯ ಓದುಗರ ಮುಂದಿಡುತ್ತಿದ್ದೇನೆ.

ರಮಣಶ್ರೀ ಪ್ರಕಾಶನದ ಶ್ರೀ ಜಯಪ್ರಕಾಶ ಹೆಗಡೆಯವರು ದೊಡ್ಡ ಮನಸ್ಸಿನಿಂದ ಈ ಕೃತಿಯ ಪ್ರಕಟಣೆಗೆ ಮುಂದೆ ಬಂದರು. ಎಷ್ಟೋ ಕಾಲ ಅಜ್ಞಾತ ಮೂಲೆ ಸೇರಿದ್ದ ಕೃತಿ ಇಂದು ಅವರಿಂದಾಗಿ ಬೆಳಕು ಕಂಡಿದೆ. ಅದಕ್ಕಾಗಿ ಅವರಿಗೆ ನನ್ನ ಅನಂತ ಕೃತಜ್ಞತೆಗಳು. ನನ್ನದೇ ಆದ ಎಂ. ಇ. ಎಸ್. ಕಾಲೇಜಿನ ಪ್ರಾಣಿಶಾಸ್ತ್ರ (ಜೀವ ಶಾಸ್ತ್ರ) ವಿಭಾಗದ ಅಧ್ಯಾಪಕರಾದ ಡಾ॥ ಪುರುಷೋತ್ತಂ, ಡಾ॥ ಲೀಲಾ, ಸಹಾಯಕರಾದ ಗೋಪಾಲರಾಜು ಮತ್ತು ಅದೇ ವಿಭಾಗದ ಪ್ರೀತಿಯ ವಿದ್ಯಾರ್ಥಿಗಳು ನನ್ನ ಅನುಭವಗಳನ್ನು ವಿಸ್ತರಿಸಿ ಬಣ್ಣಗಟ್ಟಿದ್ದಕ್ಕಾಗಿ ಅವರೆಲ್ಲರಿಗೂ ನನ್ನ ಧನ್ಯವಾದಗಳು.

ಈ ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಶ್ರೀ ವಿದ್ಯ ಪ್ರಿಂಟರ್ಸ್ ಅವರಿಗೂ ಅಂದವಾಗಿ ಮುಖಪುಟವನ್ನು ಸಿದ್ಧಪಡಿಸಿದ ಶ್ರೀ ಶಶಿಧರ್ ಅವರಿಗೂ ನನ್ನ ಧನ್ಯವಾದಗಳು.

ಈ ಕೃತಿಯನ್ನು ಓದಿ ಅನುಭವಗಳನ್ನು ಹಂಚಿಕೊಳ್ಳುತ್ತಿರುವ ಎಲ್ಲ ಸಹೃದಯ ಓದುಗರಿಗೂ ನನ್ನ ವಂದನೆಗಳು.

**ಡಾ|| ವಿಜಯಾ ಸುಬ್ಬರಾಜ್,**
ನಂ. 347, 13ನೇ 'ಬಿ' ಕ್ರಾಸ್
ವೈಯ್ಯಾಲಿಕಾವಲ್
ಬೆಂಗಳೂರು

# ಸ್ವರ್ಗ ದ್ವೀಪದ ಕನಸಿನ ಬೆನ್ನೇರಿ

ಸುಮಾರು ವರ್ಷಗಳಿಂದ ಭೂಮಿಯ ಮೇಲಿನ ಸ್ವರ್ಗ ದ್ವೀಪವೆನಿಸಿಕೊಂಡ ಅಂಡಮಾನಕ್ಕೆ ಹೇಗಾದರೂ ಮಾಡಿ ಸಾಯುವ ಮುನ್ನ ಒಮ್ಮೆ ಹೋಗಿಬರಬೇಕು ಎಂದು ಕೊಂಡಿದ್ದೆ: ನಮ್ಮ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅಂಡಮಾನದ ಹೆಸರಿಗೆ ಒಂದು ಪ್ರಾಮುಖ್ಯತೆ ಅಂಟಿಕೊಂಡಿತ್ತು. ನಮ್ಮ ಜನ ಅಮೆರಿಕಾ ಇಂಗ್ಲೆಂಡ್‌ಗಳಿಗೆ ಲಗ್ಗೆ ಹಾಕುತ್ತಾರಾದರೂ ನಮ್ಮದೇ ಆದ ಅಂಡಮಾನ್ ನಿಕೋಬಾರ್ ದ್ವೀಪ ಸಂಕೀರ್ಣದ ಸೊಬಗಿಗೆ ಮಾರುಹೋಗದಿರುವುದು ನನಗೆ ಆಶ್ಚರ್ಯವೆನಿಸಿತ್ತು. ಮುತ್ತು ರತ್ನ ಹವಳ ಭಂಡಾರವನ್ನೇ ತನ್ನ ಬಸಿರಲ್ಲಿ ಅಡಗಿಸಿಟ್ಟುಕೊಂಡ ಬಂಗಾಳಕೊಲ್ಲಿ ಸಮುದ್ರದ ನಡುವೆ ಪಚ್ಚೆಯ ಪದಕದಂತೆ ಮಿರ ಮಿರನೆ ಹೊಳೆವ ಆ ದ್ವೀಪದ ಚೆಲುವು ನನ್ನನ್ನು ಉನ್ಮತ್ತವಾಗಿಸಿತ್ತು. ರತ್ನ ಭಂಡಾರದ ಜೊತೆಗೆ ಬಗೆ ಬಗೆಯ ಜೀವರಾಶಿ" ಅಂದಕ್ಕೆ, ಅಧ್ಯಯನಕ್ಕೆ ಒದಗಿ ಬರುವ ವೈವಿಧ್ಯಮಯ ಜಲಚರ ಮಾದರಿಗಳನ್ನು ಸಂಗ್ರಹಿಸಿ ಕಾಲೇಜಿನ ಪ್ರಯೋಗ ಶಾಲೆಯನ್ನು ಶ್ರೀಮಂತಗೊಳಿಸಬಹುದಾದ ಅವಕಾಶಗಳಿತ್ತು. ಅದಕ್ಕಾಗಿಯೇ ನಾನೂ ನನ್ನ ಗೆಳತಿ ಲೀಲಾ ಪ್ರಿನ್ಸಿಪಾಲರನ್ನು ಕಾಡಿ ಬೇಡಿ ಶೈಕ್ಷಣಿಕ ಪ್ರವಾಸಕ್ಕೆ ಅನುಮತಿ ನೀಡುವಂತೆ ಮಾಡಿದೆವು. ಸುಮಾರು ಒಂದು ತಿಂಗಳ ಕಾಲ ಸಿದ್ಧತೆಗಳನ್ನು ನಡೆದವು. ಅಂಡಮಾನದ ಬಗ್ಗೆ ನಾನು ತಿಳಿದುಕೊಂಡಿದ್ದದ್ದು ಕೇವಲ ಶೇಕಡ 10 ರಷ್ಟು. ಅದಕ್ಕಾಗಿಯೇ ಅಂಡಮಾನಿನ ಬಗ್ಗೆ ತಲೆಕೆಡಿಸಿಕೊಳ್ಳತೊಡಗಿದೆ. ಎನ್‌ಸೈಕ್ಲೋಪೀಡಿಯಾ, ಮತ್ತು ಇತರೆ ಪುಸ್ತಕಗಳ ಪುಟಗಳನ್ನು ತಿರುವಿ ಹಾಕಿ ಒಂದಷ್ಟು ಮಾಹಿತಿ ಸಂಗ್ರಹಿಸಿದೆ.

**ಸಂಗ್ರಹಿಸಿದ್ದಿಷ್ಟು : –**

ಬಂಗಾಳ ಕೊಲ್ಲಿಯ ನಡುಗಡ್ಡೆಯಂತೆ ಕಾಣುವ ಅಂಡಮಾನ್ ಮತ್ತು ನಿಕೋಬಾರ್ ಸಣ್ಣ ಮತ್ತು ದೊಡ್ಡದಾದ ದ್ವೀಪ ಸಮುದಾಯವನ್ನು ಒಳಗೊಂಡಿವೆ. ಇವೆರಡೂ 190 ಕಿ.ಮೀ ಉದ್ದದ ಸಮುದ್ರ ರೇಖೆಯಿಂದ ಬೇರ್ಪಡಿಸಲಾಗಿದೆ. ಈ ಅಂಡಮಾನ್ ಹೆಸರೇ ವಿಚಿತ್ರವೆನಿಸುತ್ತದೆ. ಯಾವ ಭಾಷೆಯಿಂದ ಬಂದಿತೋ ಹೊಳೆಯುವುದೇ ಇಲ್ಲವಾದರೂ

ವಿದ್ವಾಂಸರನೇಕರು ತಮತಮಗೆ ತೋಚಿದಂತೆ ಹೆಸರಿನ ವಿಶ್ಲೇಷಣೆ ಕೊಟ್ಟಿದ್ದಾರೆ. ಆದರೆ ಮಲಯನ್ ಭಾಷೆಯಲ್ಲಿ ಕಪಿಗೆ, 'ಹಂಡುಮಾನ್' (ಹನುಮಾನ್) ಎಂದಿದ್ದು ಕ್ರಮೇಣ 'ಅಂಮೇನಿಯಾ 'ಅಂಡಮೇನಿಯಾ' ಆಗಿ ಕಡೆಗೆ 'ಅಂಡಮಾನ್' ಎಂದು ಉಳಿಯಿತು.

ಈ 'ದ್ವೀಪ ಸಂಕೀರ್ಣದ ಇತಿಹಾಸವೇ ನಿಗೂಢ'ವಾದದ್ದು. ಇಲ್ಲಿದ್ದ ಜನವೆಂದರೆ ಮಂಗೋಲಿಯನರು, ನೀಗ್ರೋ ಜನಾಂಗದವರು. 18ನೇ ಶತಮಾನದವರೆಗೂ ಮುಖ್ಯ ಭೂ ಪ್ರದೇಶದಿಂದ ಬೇರೆಯಾಗಿಯೇ ಉಳಿದಿತ್ತು. ಕೇವಲ ಭೂಪಠಗಳಲ್ಲಿ ಮಾತ್ರವೇ ಗುರುತಿಸಲಾಗಿತ್ತು. ನಿಕೋಬಾರ್ ದ್ವೀಪಗಳೊಡನೆ ಬಹಳ ಹಿಂದಿನಿಂದಲೂ ವ್ಯಾಪಾರ ಸಂಬಂಧ ಸಾಗಿಬಂದಿತ್ತು. ಪೋರ್ಚುಗೀಸ್ ಪಾದ್ರಿಗಳು, ಕ್ರೈಸ್ತ ಧರ್ಮ ನಿಕೋಬಾರಿಗಳಿಗೆ ಅಂದಿನಿಂದಲೂ ಪರಿಚಿತವೇ! ಆದರೆ ಯುರೋಪಿನ ಸಮುದ್ರ ಸಾಹಸಿಗಳಿಗೆ ಮತ್ತು ಮಿಷನರಿಗಳಿಗೆ ಕೇವಲ 17, 18ನೇ ಶತಮಾನಗಳಿಂದ ಮಾತ್ರವೇ ಪರಿಚಯ ಸಾಧ್ಯವಾಯಿತು.

ಅಂಡಮಾನಿನ ಕಣ್ಣು ಕುಕ್ಕುವ, ಜೊಲ್ಲು ಸುರಿವಂತೆ ಮಾಡುವ ಸಸ್ಯ ಸಂಪತ್ತು, ಜೀವ ಸಂಪತ್ತು ಫ್ರೆಂಚರನ್ನು ಡೇನರನ್ನು, ಪ್ರಶಿಯನ್ ಮತ್ತು ಆಫ್ರಿಕಾದವರನ್ನುಆಕರ್ಷಿಸಿದರೂ ಅವರು ಯಾರಿಗೂ ಅಂಡಮಾನ್ ಅಷ್ಟೊಂದು ಸುಲಭವಾಗಿ ವಶವಾಗಲಿಲ್ಲ. ಆದರೆ ನರಿ ಬುದ್ಧಿಯ ಬ್ರಿಟಿಷರು ಏನನ್ನಾದರೂ ವಶಪಡಿಸಿಕೊಳ್ಳಬಲ್ಲರೆಂಬುದಕ್ಕೆ 1869ರಲ್ಲಿ ಅಂಡಮಾನನ್ನು ಸ್ವಾಧೀನ ಪಡಿಸಿಕೊಂಡರು.

'ಶೆಟ್ಟಿ ಬಿಟ್ಟಲ್ಲೇ ಪಟ್ಟಣ'ವೆಂಬಂತೆ 1788 ರಲ್ಲಿ ಭಾರತದ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಕಾರ್ನ್‌ವಾಲೀಸ್ ತಲೆಯಲ್ಲಿ ಅಂಡಮಾನನ್ನು ವಸಾಹತೀಕರಣಗೊಳಿಸುವ ಉಪಾಯ ಸುಳಿಯಿತು. ಬ್ರಿಟಿಷ್ ಕಾಲೊನಿ ಅಥವಾ ವಸಾಹತಿಗೆ ಅತ್ಯಂತ ಸೂಕ್ತ ಪ್ರದೇಶವೆನಿಸಿತು.

ಸರಿ. 1789 ರಲ್ಲಿಯೇ ಚಾತಮ್ ದ್ವೀಪದಲ್ಲಿ (ಪೋರ್ಟ್‌ಬ್ಲೇರ್‌ನ ಬಳಿ) ಬ್ರಿಟಿಷ್ ಸ್ಥಾವರ ಎದ್ದೇಬಿಟ್ಟಿತು. 1824ರಲ್ಲಿ ಮೊತ್ತ ಮೊದಲ ಬ್ರಿಟಿಷ್ ತುಕಡಿಯೊಂದು ಕಾರ್ನ್‌ವಾಲ್ಲಿಸ್ ಪೋರ್ಟ್ ಬಳಿ ನೆಲೆಗೊಂಡಿತು. ಆದರೆ ಅಲ್ಲಿನ ಮೂಲನಿವಾಸಿಗಳು ಆ ಸೈನ್ಯದ ಮೇಲೆ ಬಿದ್ದು ಹಣ್ಣುಗಾಯಿ ನೀರುಗಾಯಿ ಮಾಡಿದರು. ಈ ಬ್ರಿಟಿಷ್ ಜನಾಂಗಕ್ಕೂ ಅಂಡಮಾನಿಗೂ ಒಂದು ವಿಶೇಷ ಬಗೆಯ ರಾಜಕೀಯ ಸಂಬಂಧವಿದೆ. ಅಂಡಮಾನ್ ನಮ್ಮದೇ ಭಾರತದ ಭಾಗವಾಗಿದ್ದರೂ ನಮಗೇ ದಂಡನೆ ನೀಡಲು ಇದನ್ನೇ ಕೇಂದ್ರವಾಗಿ ಬಳಸಿಕೊಂಡದ್ದು ದುರಂತ ವ್ಯಂಗ್ಯವಾಗಿದೆ.

ಸದ್ಯಕ್ಕೆ ಇಷ್ಟು ಸಾಕೆನಿಸಿತು. ಅಲ್ಲಿಗೇ ಹೋದ ಮೇಲೆ ಖುದ್ದಾಗಿ ನೋಡಿ ಅದರ ಬಗ್ಗೆ ತಿಳಿದು ಕೊಳ್ಳುವುದೆನಿಸಿತು. ಪ್ರಾಚೀನ ಕಾಲದಿಂದಲೂ ಜನ ಸಂಪರ್ಕದಿಂದ ದೂರವಾಗಿ ಕಡಲಾಚೆಯ ಕಾಡುಗುಡ್ಡಗಳಲ್ಲಿ ಆದಿ ಮಾನವರಂತೆ ಬದುಕುತ್ತಿರುವ ಜನಾಂಗಗಳಾದ ಜಾರುವಾ, ಓಂಗೆ, ಸೋಂಬಿಯನ್ ಮುಂತಾದ ಜನ ಜಾತಿಗಳಿವೆ. ಅವರನ್ನು ಕಾಣಬೇಕು. ಇಲ್ಲವೇ ಅವರ ಬಗ್ಗೆ ಅಲ್ಲಿನ Anthropological Survey of India ದ ಮೂಲಕ ತಿಳಿದುಕೊಳ್ಳಬೇಕೆಂದು ತೀರ್ಮಾನಿಸಿದೆ.

**ಕನಸುಗಳನ್ನು ಕಾಣತೊಡಗಿದ್ದು :-**

ಅಂಡಮಾನ್ ನನಗೊಂದು ಅಬ್ಸೆಷನ್ ಅಥವಾ ಗುಂಗಿನಂತೆ ಕಾಡಿತು. ಅಂಡಮಾನದ ಬಗ್ಗೆ ಕವಿತೆಗಳು ಕುಣಿದಾಡಿದವು; ಕನಸುಗಳು ಸುಳಿದಾಡಿದವು. ಸುಮಾರು ಹದಿನೈದು ದಿನಗಳಿಂದಲೂ ನಿದ್ದೆಯಿಲ್ಲ. ನಮ್ಮ ಕಲ್ಪನೆಯ ಸ್ವರ್ಗ ದ್ವೀಪವಾದ ಅಂಡಮಾನಿಗೆ ಹೋಗುವ ತೀರ್ಮಾನ ಗಟ್ಟಿಯಾದಾಗಿನಿಂದ ಏನೋ ಒಂದು ಬಗೆಯ ಖುಷಿ ; ಸಂಭ್ರಮ ; ರೋಮಾಂಚನ, -ಒಂದು ಕಡೆಗಾದರೆ ! ಸಮುದ್ರ ಪ್ರಯಾಣದ ಭೀತಿ ಒಳಗೊಳಗೇ ಹೆಡೆಯಾಡುತ್ತಿತ್ತು. ಪುಟ್ಟ ಮಕ್ಕಳು ಹೆದರುವಂತೆ ಹೆದರುತ್ತಿದ್ದೆ. ಆದರೆ ಯಾರ ಮುಂದೂ ಅದನ್ನು ಕಾಣಿಸುತ್ತಿರಲಿಲ್ಲ. ಅಲ್ಲದೆ 'ನಾನೊಬ್ಬಳೇ ಪ್ರಯಾಣ ಮಾಡುತ್ತಿಲ್ಲವಲ್ಲ! -ನನ್ನೊಟ್ಟಿಗೆ ಇನ್ನೂ ಸಾಕಷ್ಟು ಮಂದಿ ವಿದ್ಯಾರ್ಥಿಗಳೂ ಸೇರಿದಂತೆ ಇದ್ದಾರಲ್ಲ ; ಅವರೆಲ್ಲರಿಗೆ ಆದದ್ದು ನನಗೂ ಆಗುತ್ತೆ' - ಎಂದು ಹುಸಿ ಧೈರ್ಯ ತುಂಬಿಕೊಳ್ಳುತ್ತಿದ್ದೆ. ನಮ್ಮ ಪ್ರವಾಸದ ವಿಚಾರ ಯಾವ ಪತ್ರಿಕೆಯಲ್ಲೂ ಜಾಹಿರಾತಾಗಿ ಬರದಿದ್ದರೂ ಬಹಳ ಜನಕ್ಕೆ ನಮ್ಮಿಂದಲೇ ಪಬ್ಲಿಸಿಟಿ ಸಿಕ್ಕಿತ್ತು. ಸರಿ. ಅವರೆಲ್ಲರೂ ನಮ್ಮ ಅದೃಷ್ಟಕ್ಕಾಗಿ ಅಭಿನಂದಿಸುವವರೇ! - ಹಾರೈಸುವವರೇ! ಕೆಲವರಿಗೆ ನನ್ನ ಈ ಚಾನ್ಸ್ ಅಸೂಯೆಗೂ ದಾರಿ ಮಾಡಿತ್ತು. ಹಾಗೆ ನೋಡಿದರೆ ಬೆಂಗಳೂರು ಮೈಸೂರಿಗೆ ಹೋಗುವಷ್ಟು ಸಲೀಸಾಗಿ ಅಮೇರಿಕಾಗೆ, ಇಂಗ್ಲೆಂಡಿಗೆ ಹೋಗಿ ಬರುವವರಿದ್ದಾರೆ. ಮುಂದೆ ಇದೇನೂ ಅಲ್ಲ.

ಆದರೆ ನನಗೆ ಅಂಡಮಾನ್ ಪ್ರವಾಸ ಅದೆಲ್ಲಕ್ಕಿಂತ ಹೆಚ್ಚಿನದು ; ಮಹತ್ವದ್ದು! ಹಿರಿಹಿರಿ ಹಿಗ್ಗಿದೆ. ನನ್ನ ಸಹೋದ್ಯೋಗಿಗಳ ಮುಂದೆಲ್ಲ ನನ್ನ ಅಂಡಮಾನ್ ಪ್ರವಾಸದ ವಿಚಾರವನ್ನು ಬೇಕಾಗಲಿ, ಬೇಡದಿರಲಿ, ಹೇಳಿದ್ದೇ ಹೇಳಿದ್ದು. ಯಾವುದೋ ಮಹತ್ವದ ದಿಗ್ವಿಜಯಕ್ಕೆ ಹೊರಡಲಿದ್ದೇನೆಂಬ ಭಾವನೆಯೇ ನನ್ನನ್ನು ಆವರಿಸಿತ್ತು.

ಎದ್ದರೆ ಕೂತರೆ ಸ್ವರ್ಗ ದ್ವೀಪದ ಕನಸುಗಳು; ಹಗಲುಗನಸುಗಳು! ಕಡಲೆದೆಯ ಹಸಿರು ಪದಕವಾಗಿದ್ದ ಅಂಡಮಾನ ಕಣ್ಣು ಮುಚ್ಚಿದರೆ ಕನಸಾಗಿ ಅರಳುತ್ತಿತ್ತು. "ವಿಸ್ತಾರವಾದ ಬಾನಗಲದ ನೀಲಿ ಕಡಲು -- ನಡುವಿನಿಂದ ಅಂಡಮಾನ-- ಅಲ್ಲ ಅಲ್ಲ-- ಅಂದವಾದ ದ್ವೀಪ ಸುಂದರಿ ಮೆಲು ಮೆಲನೆ ಎದ್ದು ಬಂದಳು... ನೀಲಿ ನಿರಿಗೆಯ ಸೀರೆ... ಹಿರಿದೆರೆ ಕಿರಿದೆರೆಗಳು ಸಾಲುಗಟ್ಟಿ ಸಲ್ಲಿಸುತ್ತಿದ್ದ ಗೌರವ ರಕ್ಷೆ.. ಮತ್ಸ್ಯ ಕನ್ಯೆಯರಿಂದ ಮಂಗಳ ಗಾನ! ಸ್ವತಃ ಸಮುದ್ರ ರಾಣಿಯೇ ಬಂದು ನಕ್ಷತ್ರ ಮಲ್ಲಿಗೆಯ ದಂಡೆ ಮುಡಿಸಿದ್ದಾಳೆ... ಹಣೆಗೆ ಚಂದ್ರ ಕುಂಕುಮ ಬೊಟ್ಟನಿಟ್ಟಿದ್ದಾಳೆ... ತಂಗುಗಳು ತೋಳು ಬೀಸಿ ಚವರಿ ಸೇವೆ ನೀಡುತ್ತಿವೆ.... ಜಲಚರಗಳು ಶಿಸ್ತಿನಿಂದ ಕವಾಯತಿಗೆ ನಿಂತಂತೆ ನಿಂತಿವೆ... ಎಲ್ಲಿಂದಲೋ ಕಡಲಲೆಯ ಮೊರೆತದ ಹಿಮ್ಮೇಳಕ್ಕೆ ಅಸ್ಪಷ್ಟ ಗಾನ ತರಂಗಗಳು ತೇಲಿಬರುತ್ತಿವೆ... ನೋಡುತ್ತಿದಂತೆ ಅಂದಮಾನದ ಅಂದಗಾತಿ ಬೆಡಗು ಬಿನ್ನಾಣಗಳಿಂದ ನನ್ನೆಡೆಗೇ ನಡೆದು ಬರುತ್ತಿದ್ದಾಳೇ! ಕಣ್ ಕುಕ್ಕುವ ಅಂದ! ಇನ್ನೂ ಹತ್ತಿರ ಹತ್ತಿರವಾದಳು! ನನಗೆ ಭಯ ಆಶ್ಚರ್ಯಗಳು ಒಮ್ಮೆಲೇ! ಇನ್ನೂ ಇನ್ನೂ ಬರುತ್ತಿದ್ದಾಳೆ. ಕಣ್ ಕುರುಡಾಗಿಸುವ ಬೆಳಕಿನ ಬೊಂಬೆಯಂತಿದ್ದಾಳೇ.. ಅವಳನ್ನು ತಡೆಯಬೇಕು ಎಂದುಕೊಂಡೆ... ಕೂಗಿದೆ. ಸುಂದರಿ

ನಿಲ್ಲು ನಿಲ್ಲು ಅಲ್ಲೇ!...... ನೀ ಏಕೆ ನನ್ನೆಡೆಗೆ ಬರುತ್ತಿರುವಿ? ... ನೀ ಯಾರು? ... ಹೀಗೇಕೆ ಬಂದು ನನ್ನನ್ನು ನಿನ್ನ ಚೆಲುವಿನಿಂದ ಕೊಲ್ಲುತ್ತಿರುವಿ? – ಎಂದು ಪ್ರಶ್ನಿಸಿದೆ.

" ಯಾಕೆ!? .. ಯಾರೆಂದು ತಿಳಿಯಲಿಲ್ಲವೇ? ! ನನಗಾಗಿ ನನ್ನ ಕಾಣುವುದಕ್ಕಾಗಿ ಬರುತ್ತಿರುವಿರಿ. ನಾನೇ ಬಂದರೆ ಬೇಡವೆನ್ನುತ್ತಿ !...... ನಾನು ಅಂಡಮಾನ ಸುಂದರಿ. ದ್ವೀಪರಾಣಿ!.... ಈ ಕಡಲ ನಡುವಿನ ಪಚ್ಚೆಯರ ಮನೆಯಲ್ಲಿ ವಾಸಿಸುತ್ತೇನೆ. ನನ್ನ ರಾಜ್ಯಕ್ಕೆ ನಿಮಗೆ ಸ್ವಾಗತ ಹೇಳಬೇಕೆಂದು ಬಂದಿರುವೆ". – ಎಂದಳು ಸುಂದರಿ.

"ಓಹ್ ಅದ್ಭುತ ! ನಿನ್ನ ಸೌಂದರ್ಯದಷ್ಟೇ, ನಿನ್ನ ಗುಣವೂ ಮಹಾನ್ ! ...ಆದರೆ ನೀನೇ ಬಂದು ಸ್ವಾಗತ ಬಯಸಬೇಕಿರಲಿಲ್ಲ : ನಾವೇ ಬಂದು ನಿನ್ನನ್ನು ..... ನಿನ್ನೆದೆಯಾಳಗಳನ್ನು ಶೋಧಿಸುತ್ತೇವೆ. ನಿನ್ನ ಸಾಮ್ರಾಜ್ಯದ ಮೂಲೆ ಮೂಲೆಗಳನ್ನು ಹುಡುಕಿ ತೆಗೆಯುತ್ತೇವೆ. ನಿನ್ನ ಪ್ರಜೆಗಳನ್ನು ಕಂಡುಮಾತನಾಡುತ್ತೇವೆ. ನಿನ್ನ ಆತಿಥ್ಯವನ್ನು ಆಪ್ತತೆಯಿಂದ ಸ್ವೀಕರಿಸುತ್ತೇವೆ. ನಿನಗೆ ತೊಂದರೆ ಬೇಡ. ನನ್ನೊಂದಿಗೆ ನನ್ನ ಗೆಳಯರಿದ್ದಾರೆ : ಯುವ ಕೊಲಂಬಸರಿದ್ದಾರೆ. ವಾಸ್ಕೊಗಳಿದ್ದಾರೆ. ನಿನ್ನೂರಿನ ಅಂಗುಲಂಗುಲವನ್ನೂ ಅಳೆಯುತ್ತಾರೆ : ನಿನಗೂ ಕಾಣದ್ದನ್ನು ಕಂಡು ತೆಗೆಯುತ್ತಾರೆ. ನಿನ್ನ ಬಳಸಿರುವ ಕಡಲಿನೊಡಲಿನ ಗುಟ್ಟುಗಳನ್ನೂ ಹೆಕ್ಕಿ ತೆಗೆಯುತ್ತಾರೆ. ನಿದ್ದೆಯಲಿ ಮೊದ್ದಾಗಿ ಮಲಗಿರುವ ನಕ್ಷತ್ರ ಮೀನುಗಳನ್ನು ಕೆಣಕಿ ಕರೆಯುತ್ತಾರೆ. ಹವಳ ತೋಟಗಳಲ್ಲಿ ಅಡ್ಡಾಡಿ ಬರುತ್ತಾರೆ : ಶಂಕಿನ ಕೊಂಕುಗಳಲ್ಲಿ ನಾಚಿ ಅಡಗಿ ಕುಳಿತಿರುವವರನ್ನು ಬಯಲಿಗೆಳೆಯುತ್ತಾರೆ...... ನಿನಗೆ ತೊಂದರೆ ಬೇಡ..... ನೀ ಹೋಗು ....ಹೋಗು ಸುಂದರಿ...." ಎಂದೆ.

"ಹೊರಗಿನಿಂದ ಬಂದ ಅತಿಥಿಗಳಿಗೆ ಅಪಚಾರವಾಗಬಾರದು. ಅತಿಥಿಗಳ ಆದರವೇ ನಮ್ಮ ಧರ್ಮ ... ನೀವು ನನ್ನ ಆತಿಥ್ಯವನ್ನು ಸ್ವೀಕರಿಸಲೇ ಬೇಕು ... ನನ್ನ ಅಪಾರ ಸಂಪತ್ತು ನಿಮ್ಮೆಲ್ಲರವಲೋಕನಕ್ಕೇಂದೇ ತೆರೆದಿರುಸುತ್ತೇನೆ.... ನಿಮಗೆ ನನ್ನ ಅಗತ್ಯವಿದ್ದಾಗ ನನ್ನನ್ನು ಕರೆಯಿರಿ.. 'ನೀಲ ಸುಂದರಿ'–ಎಂದರೆ ಸಾಕು .... ನಾ ಬರುತ್ತೇನೆ ... ನನ್ನೆಲ್ಲ ಮಕ್ಕಳೂ ನಿಮ್ಮ ಸೇವೆಗೆ' ... ಎಂದು ಹೇಳುತ್ತಿರುವಷ್ಟರಲ್ಲಿ ಒಂದು ಬೃಹತ್ತಾದ ತಿಮಿಂಗಿಲ ಸರಸರನೆ ನಡೆದು ಬಂದು ಸುಂದರಿಯ ಪಾದಗಳೆಡೆ ನಿಂತು ಕೊಂಡಿತು. ಸುಂದಿರಿಯನ್ನು ಕಂಡು ದೊಡ್ಡದಾಗಿ ಬಾಯಿ ತೆರೆಯಿತು. ಅದರ ಬ್ರಹ್ಮಾಂಡದಷ್ಟು ದೊಡ್ಡದಾದ ಬಾಯನ್ನು ನೋಡಿದ್ದೇ,... ಗಡಗಡ ನಡುಗಿದೆ. ನಡುಗುತ್ತಿರುವಂತೆಯೇ ಸುಂದರಿ ಅದರ ಬಾಯೊಳಗೆ ಪ್ರವೇಶಿಸುವುದನ್ನು ನೋಡಿ ಚಿಟ್ಟನೆ ಚೀರಿದೆ... ಚೀರುತ್ತಲೇ ಇದ್ದೆ...ಅಯ್ಯೋ ಅಯ್ಯೊ ಸುಂದರಿ ... ಸುಂದರಿ ... ನಿನಗೇನಾಯಿತು? ಹಾಳು ತಿಮಿಂಗಿಲದ ಬಾಯಿ ತುತ್ತಾದೆಯಲ್ಲ ! .. ಎಂದು ಬಿಕ್ಕಿ ಬಿಕ್ಕಿ ಅಳತೊಡಗಿದೆ. ಪಕ್ಕದಲ್ಲಿ ಮಲಗಿದ್ದ ಶ್ರೀಕಾಂತ ಗಾಭರಿಗೊಂಡು ಎದ್ದು ಕುಳಿತ. "ಏನಾಯ್ತೋ?" ಎಂದು ನನ್ನನ್ನು ನೋಡಿ ಪ್ರಶ್ನಿಸಿದ. ಅವನ ಪ್ರಶ್ನೆಗೆ ನಾನೇನು ಉತ್ತರ ಹೇಳಲಿ? ನನ್ನತ್ತ ಮತ್ತೊಮ್ಮೆ ನೋಡಿದ. ಮೈಮುಖವೆಲ್ಲ ಬೆವತಿತ್ತು. ಆದರೂ ನಾನೇನೂ ಹೇಳಲಿಲ್ಲ. ನನ್ನ ಕನಸಿನ ಬಗ್ಗೆ ಹೇಳಿದರೆ ನಕ್ಕಾನು ಎನಿಸಿತು. ಆದರೂ ಅವನು ಊಹಿಸಿದ. ನನ್ನ ಸ್ವಭಾವ ಬಲ್ಲವನಾಗಿದ್ದ. ಸಣ್ಣಪುಟ್ಟ ವಿಷಯಗಳನ್ನೂ

ತೀರಾ ಮನಸ್ಸಿಗೆ ಹಚ್ಚಿಕೊಳ್ಳುತ್ತಿದ್ದೆ. ....."ಸರಿಮತ್ತೇನಾದರೂ ಕನಸು ಬಿತ್ತೇನು? ಅದೇ ನಿನ್ನ ಅಂಡಮಾನ – ಸಮುದ್ರ ಪ್ರಯಾಣ .. ಇತ್ಯಾದಿ ಇತ್ಯಾದಿ ... ಆದರೆ ಇಷ್ಟು ಗಾಭರಿಯಿಂದ ಚೀರಿಕೊಳ್ಳುವಂಥಾದ್ದೇನಾಯಿತು? ..... ಹಡಗೇನಾದರೂ ಮುಳುಗಿತಾ ? -- ಇಲ್ಲ ಯಾವುದಾದರೂ ಕಾಡು ಪ್ರಾಣಿ ಎದುರಾಯಿತಾ ? – ಎಂದು ನಗುತ್ತ ಸ್ವಲ್ಪ ಲೇವಡಿ ಮಾಡಿದ. ನನಗೂ ರೇಗಿತು. ಆದರೂ ಸುಮ್ಮನಾದೆ. ಏಕೆಂದರೆ ಅವನು ಊಹಿಸಿದಂತೆ ನನಗೆ ಅಂಡಮಾನ ಸಮುದ್ರ– ಜಲಚರ ..ಹವಳ ಬಳ್ಳಿಗಳು ! –ಇವಲ್ಲದೆ ಬೇರೇನೂ ಕನಸು ಕಾಣಲು ಸಾಧ್ಯವಿರಲಿಲ್ಲವಾದರೂ ನನ್ನ ಇತ್ತೀಚಿನ ವರ್ತನೆಗೆ ಅವರಿಗೆ ಸಾಕಷ್ಟು ಬೇಸರವಾಗಿದ್ದುದಂತೂ ಸತ್ಯ!

"ಮಾರಾಯ್ತಿ ...ಯಾವತ್ತು ನಿನ್ನ ಅಂಡಮಾನದ ಪ್ರವಾಸ ಮುಗಿಯುತ್ತೋ ಹೇಳು ನನಗೆ ಸ್ವಲ್ಪ ನೆಮ್ಮದಿಯಿಂದ ಉಸಿರಾಡಲು ಸಾಧ್ಯವಾಗುತ್ತದೆ. ನಿನ್ನ ಅಂಡಮಾನದ ಬಗ್ಗೆ ಕೇಳಿ ಕೇಳಿ ಸಾಕಾಗಿದೆ !" – ಎಂದ ಅತಿ ಬೇಸರದಲ್ಲಿ.

"ಹೌದೌದು ನಿಮಗೆ ಸಾಕಾಗದೆ ಇರುತ್ತಯೇ? ... ನೀವೇ ಹೇಳ್ರಿ ಇಂಥ ಅವಕಾಶ ಸಿಕ್ಕಿದಾಗ ನಿಮಗೆ ಸಂತೋಷ ಆಗುತ್ತಾ ಇಲ್ವಾ? ನಿಮಗೇನು ಗೊತ್ತು! ಎಂಥ ಸುಂದರ ದ್ವೀಪ ! ಸುತ್ತ ಸಮುದ್ರ ಮಧ್ಯೆ ಒಂದಷ್ಟು ಅಗಲ ನೆಲ ... ಎಲ್ಲಿ ನೋಡಿದರೂ ತೆಂಗಿನ ಮರ ಸಾಲುಗಳು ! ಮಂದ ಮಂದ ಬೀಸುವ ತಣ್ಣನೆಯ ಸಮುದ್ರ ಗಾಳಿ ! ತಲೆಮೇಲೆ ವಿಸ್ತಾರವಾದ ಬಾನಿನ ಕೊಡೆ ! ಅದ್ಭುತವಾದ ಹವಳ ಬಳ್ಳಿಯ ತೋರಣಗಳು ! ಕಾಮನಬಿಲ್ಲಿನ ಬಣ್ಣದ ಮೀನುಗಳು ! ... ನೆನೆಸಿಕೊಂಡರೇನೇ ಮೈಜುಂ ಎನ್ನುತ್ತದೆ. ಅದಕ್ಕೂ ಪಡೆದು ಬಂದಿರಬೇಕು" ಎಂದೆ, ಅವನ ಹೊಟ್ಟೆ ಉರಿಸಲು! .... ಆದರೆ ಅವನ ಮೇಲೆ ನಿರೀಕ್ಷಿಸಿದ ಪರಿಣಾಮ ಆಗಲೇ ಇಲ್ಲ. ಸ್ಥಿತ ಪ್ರಜ್ಞನಂತೆ ಯಾವುದಕ್ಕೂ ಸ್ಪಂದಿಸದೆ ನಿರ್ಜೀವ ಪ್ರತಿಮೆಯಂತೆ ಕುಳಿತಿದ್ದ.

ಈ ರೀತಿಯ ಜಗಳ ... ಮಾತುಕತೆಗಳು ಮಾಮೂಲಾಗಿ ಬಿಟ್ಟಿತ್ತು. ಮಧ್ಯೆ ಮಧ್ಯೆ ಹಡಗಿನ ಪಯಣದ ಭೀತಿ ಧುತ್ ಧುತ್ ಎಂದು ಮೇಲೇಳುತ್ತಿತ್ತು. ಅಗಲೇ ನನಗೆ ನಿನ್ನ ಪ್ರಾಣದ ಮೇಲೆ ನನಗೆಷ್ಟು ಆಸೆಯಿದೆ – ಎಂದು ಹೊಳೆದದ್ದು ! ಹೊರಗೆ ಮಾತ್ರ ಪ್ರಶಾಂತವಾಗಿ ಕಾಣುತ್ತಿದ್ದೆ. ಪ್ರಯಾಣ ಮಾಡುವಾಗ ಬಿರುಗಾಳಿ ಎದ್ದು ಹಡಗು ಮುಳುಗಿದರೆ?!... ರೆ...? .....ರೆ? ಎಂದು ಯೋಚಿಸುತ್ತಿದ್ದೆ. ಅದಕ್ಕೇ ನನ್ನ ಬಳಿ ಇರುವ (ಅವನಿಗೆ ಕಾಣದಂತೆ!) ವಸ್ತು, ಒಡವೆ ... ಹಣ... ಬ್ಯಾಂಕ್ ಪಾಸ್ ಬುಕ್ – ಎಲ್ಲವನ್ನೂ ಹೇಳಿ ಬಿಡಬೇಕೆಂದುಕೊಂಡೆ. ಇವತ್ತು ಪ್ರಪಂಚ ಎಷ್ಟು ವೇಗದಲ್ಲಿ ಮುಂದೆ ಸಾಗಿದೆ. ಸಣ್ಣ ಮಕ್ಕಳೂ ಕೂಡಾ ಯಾವುದಕ್ಕೂ ಹೆದರದೆ ಆಕಾಶದಲ್ಲಿ ಹಾರಾಡುತ್ತಾ, ಸಮುದ್ರದಲ್ಲಿ ಮುಳುಗಿ ಏಳುತ್ತಾ, ಸಾವಿರಾರು ಅಡಿ ಎತ್ತರದ ಗಿರಿ ಶಿಖರಗಳ ಮೇಲಿಂದ ಡೈವ್ ಮಾಡುತ್ತ ಭಯವೆಂದರೇನೆಂದೇ ಅರಿಯದೆ ಮುನ್ನುಗ್ಗುತ್ತಿರುವಾಗ ನಾನು ... ನಾನು ... ಹೀಗೆ ಹೆದರುವುದೇ? ಎಂದು ನನಗೆ ನಾನೇ ಸಂಜಾಯಿಷಿ ಕೊಟ್ಟುಕೊಂಡೆ. ಹಡಗು, ವಿಮಾನಗಳ ಪ್ರಯಾಣದ ಅನುಭವವಿಲ್ಲದವಳು. ಯಾವುದೇ ಹೊಸ ಅನುಭವಕ್ಕೆ

ತೆರೆದುಕೊಳ್ಳುವಾಗ ಸ್ವಲ್ಪ ಬೇರೆಯವರಿಗಿಂತ ಹೆಚ್ಚಾಗಿ emotional ಆಗುತ್ತಿದ್ದೆ. ನೋಡಿದವರಿಗೆ ಕೆಲವೊಮ್ಮೆ ನನ್ನ ವರ್ತನೆ ಬಾಲಿಶವೆನಿಸುತ್ತಿತ್ತು. ಹಾಗೆ ಅನಿಸಿದರೆ ಸಹಜವೇ! ನನ್ನ ಸಂತೋಷ, ಸಂಭ್ರಮ, ಕಾತರ, ಉತ್ಸಾಹಗಳಿಗೆ ಎಲ್ಲೆಕಟ್ಟು ಇಲ್ಲದಂತಾಯಿತು.

ದಿನಕ್ಕೊಮ್ಮೆ ಪ್ರಾಣಿಶಾಸ್ತ್ರ ವಿಭಾಗದವರನ್ನು ಭೇಟಿಯಾಗಿ ಅಂಡಮಾನದ ಪ್ರವಾಸದ ಬೆಳವಣಿಗೆಯ ಬಗ್ಗೆ ವಿಚಾರಿಸುತ್ತಿದ್ದೆ. ನನ್ನ ಗೆಲುವು, ಪುಟಿವ ಉತ್ಸಾಹಗಳನ್ನು ಕಂಡು ನನ್ನ ಗೆಳತಿ ಲೀಲ ಕೀಟಲೇ ಶುರುಮಾಡಿದಳು.

" ಈ ವಿಜಿ ಇದ್ದಾಳಲ್ಲ! ... ಅಬ್ಬಬ್ಬ ಅದೇನು excite ಆಗ್ತಾಳೆ! ... ಸಾರ್ ಇವಳಂತೂ ನಿದ್ದೇನೆ ಮಾಡಿರೋಲ್ಲ ಎನಿಸುತ್ತೆ ... ಇವಳನ್ನೇ ನಮ್ಮ ಟೀಮಿನ ಲೀಡರ್ ಆಗಿ ಮಾಡಿ ಬಿಡೋಣ" – ಎಂದು ತನ್ನ ವಿಭಾಗದ ಮತ್ತು ನಮ್ಮ ಜೊತೆಗೆ ಪ್ರವಾಸಕ್ಕೆ ಬರಲಿದ್ದ ಸಹೋದ್ಯೋಗಿಗೆ ಹೇಳಿದಳು.

ಅವಳ ಮಾತನ್ನು ನಾನೇನೂ ಸೀರಿಯಸ್ಸಾಗಿ ತೆಗೆದುಕೊಳ್ಳಲಿಲ್ಲ. ನನ್ನ ಮೇಲಿನ ಪ್ರೀತಿ, ಸಲುಗೆಗಳಿಂದ ಬಂದ ಮಾತೆಂದು ನಾನು ಬಲ್ಲೆ. ಆದ್ದರಿಂದಲೇ ಅವಳ ಮಾತಿಗೆ ನಾನು ಸುಮ್ಮನೆ ನಕ್ಕು ನುಡಿದೆ –

" ಹೌದಮ್ಮ ಲೀಡರ್ ಅಂತ ಹೆಚ್ಚಿನ ಪ್ರಿವಿಲೆಜ್ ಕೊಡೋ ಹಾಗಿದ್ದರೆ ನೀ ಹೇಳಿದ್ದಕ್ಕೆ ಸೈ" – ಎಂದೆ.

## ಪ್ರವಾಸಕ್ಕೆ ಪೂರ್ವ ಸಿದ್ಧತೆ :-

ಕಾಲೇಜಿನಿಂದ ವಿದ್ಯಾರ್ಥಿಗಳನ್ನು ಶೈಕ್ಷಣಿಕ ಪ್ರವಾಸಕ್ಕಾಗಿ ಕರೆದೊಯ್ಯುತ್ತಿದ್ದುದರಿಂದ ಸುಮಾರು ಎರಡು – ಮೂರು ತಿಂಗಳಿನಿಂದಲೂ ಷಿಪ್ಪಿಂಗ್ ಕಾರ್ಪೊರೇಷನ್ ಆಫ್ ಇಂಡಿಯಾ' ದೊಂದಿಗೆ ಅಧಿಕೃತ ಪತ್ರ ವ್ಯವಹಾರವನ್ನು ನಡೆಸಲಾಗಿತ್ತು. ಮೊದಲೇ ಕಾಲೇಜಿನ ಪ್ರಾಂಶುಪಾಲರನ್ನು ಬಹಳ ಕಷ್ಟದಿಂದ ಈ ಪ್ರವಾಸಕ್ಕೆ ಒಪ್ಪಿಸಿದ್ದೆವು. ಅವರಿಗೆ ನನ್ನ ಹಾಗೆಯೇ ಹಡಗಿನ ಪ್ರಯಾಣ – ಸಮುದ್ರ – ಬಿರುಗಾಳಿ – ಅಥವಾ ಚಂಡ ಮಾರುತ ಅನಿರೀಕ್ಷಿತ ಹೊಡೆತದ ಭೀತಿಯಿತ್ತು. ಅಷ್ಟೊಂದು ವಿದ್ಯಾರ್ಥಿಗಳು ಹೋಗುತ್ತಿದ್ದಾರೆ.... ಅವರೆಲ್ಲರ ಜವಾಬ್ದಾರಿ ಪ್ರಿನ್ಸಿಪಾಲರದೇ ಅಲ್ಲವೇ? .. ಅದಕ್ಕೆಂದೇ ನಮ್ಮ ಜವಾಬ್ದಾರಿಯೂ ಇಮ್ಮಡಿಸಿತ್ತು. ಅದೇನೋ ನಮಗೆ ಕೆಟ್ಟ ಹಟ, ಹೋಗಲೇ ಬೇಕೆಂದು ! ... ನಾವು ಮೂವರೂ ಸೇರಿ ಪ್ರಿನ್ಸಿಪಾಲರಿಗೆ ಧೈರ್ಯ, ಭರವಸೆಗಳನ್ನು ನೀಡುತ್ತಿದ್ದೆವು.

ನಾನು ಸಾಹಿತ್ಯದ ಮೇಡಂ. ಜೀವ ಮಾದರಿಗಳ ಸಂಗ್ರಹಕ್ಕೆ ಶೈಕ್ಷಣಿಕ ಪ್ರವಾಸಕ್ಕೆ ಹೋಗುವಾಗ ನನ್ನ ಅಗತ್ಯವೇನೂ ಇರದಿದ್ದರೂ ಆ ವಿಭಾಗದವರೊಂದಿಗೆ ನನ್ನ ಸಲುಗೆ ಹೆಚ್ಚು. ಅಲ್ಲದೆ ನಾನೂ ನನ್ನ ಪದವಿಯಲ್ಲಿ ಸಸ್ಯ ಶಾಸ್ತ್ರ, ಜೀವಶಾಸ್ತ್ರಗಳನ್ನು ವಿಶೇಷ ವಿಷಯಗಳಾಗಿ ಓದಿದ್ದೆ. ಆದ್ದರಿಂದ ನನಗೆ ಒಂದು ಬಗೆಯ ವಿಶೇಷ ಅಧಿಕಾರ, ಅವಕಾಶಗಳು ದೊರೆತಿದ್ದವು.

ಇನ್ನೇನು ನಮ್ಮ ಟೀಮಿನ ಸಂಖ್ಯೆ ಮೂವತ್ತೈದು ಎಂದು ತೀರ್ಮಾನವಾಯಿತು. ಮೂವತ್ತು ವಿದ್ಯಾರ್ಥಿಗಳು : ಮೂವರು ಅಧ್ಯಾಪಕರು' ಇಬ್ಬರು ಸಹಾಯಕರು! ವಿದ್ಯಾರ್ಥಿಗಳಿಗೆ ಮುಖ್ಯವಾಗಿ ನಾವು ಶಿಸ್ತಿನ ಪಾಠವನ್ನು ಕಲಿಸಬೇಕಿತ್ತು. ಯಾಕೆಂದರೆ ಸ್ತ್ರೀ ಲಿಂಗ ಪುಲ್ಲಿಂಗಗಳಿದ್ದವು.

ವಿದ್ಯಾರ್ಥಿಗಳನ್ನೆಲ್ಲ ಕರೆದು ಅವರಿಗೆ ಪ್ರವಾಸದ ಬಗೆಗೆ ಪೂರ್ಣ ವಿವರಗಳನ್ನು ಕೊಡಬೇಕಾಗಿತ್ತು. ಪ್ರಯಾಣಕ್ಕೆ ಅಗತ್ಯವಾದ ವಸ್ತುಗಳನ್ನೆಲ್ಲ ತರಬೇಕೆಂದು ಹೇಳಿದೆವು. ವಿದ್ಯಾರ್ಥಿಗಳ ಮುಖದಲ್ಲಿ ಎಲ್ಲಿಲ್ಲದ ಉತ್ಸಾಹ. ದಿಗ್ವಿಜಯಕ್ಕೆ ಹೊರಡುವ ಸಂಭ್ರಮ. ನಮಗಿಂತ ಮೊದಲೇ ಒಬ್ಬೊಬ್ಬರೂ ತಮ್ಮ ಅಗತ್ಯಗಳನ್ನು ಅಣಿ ಮಾಡಿಕೊಳ್ಳುತ್ತಿದ್ದರು. ಸ್ಪೆಸಿಮೆನ್‌ಗಳ ಸಂಗ್ರಹಕ್ಕಾಗಿ ಹೊರಡುವುದರಿಂದ ಪ್ರತಿದಿನ ಸಮುದ್ರದ ಕಡೆಗೆ ನಡೆಯಬೇಕಿತ್ತು. ಅದಕ್ಕಾಗಿ ಲೀಲಾ ಎದ್ದು ನಿಂತು ಪುಟ್ಟ ಭಾಷಣ ನೀಡಿದಳು.

"ನೋಡಿ ವಿದ್ಯಾರ್ಥಿಗಳೇ ಇಡೀ ಕಾಲೇಜಿನ ಅಸ್ತಿತ್ವದ ವರ್ಷಗಳಲ್ಲಿ ಇಷ್ಟು ದೂರ, ಅದೂ ಸಮುದ್ರ ಪ್ರಯಾಣಕ್ಕೆ ಹೊರಟಿರುವುದು ಇದೇ ಮೊದಲು. ನಾವೆಷ್ಟೋ ಪ್ರಯತ್ನ ಮಾಡಿ ಈ ಶೈಕ್ಷಣಿಕ ಪ್ರವಾಸಕ್ಕೆ ಪ್ರಿನ್ಸಿಪಾಲರನ್ನು ಒಪ್ಪಿಸಿದ್ದೇವೆ. ನೀವುಗಳೆಲ್ಲ ನಮ್ಮ ಕಾಲೇಜಿನ ಘನತೆ, ಗೌರವ, ಪ್ರತಿಷ್ಠೆಗೆ ತಕ್ಕಂತೆ ನಡೆದುಕೊಳ್ಳಬೇಕು. ಅದೂ ಹುಡುಗ ಹುಡುಗಿಯರು ಒಟ್ಟಿಗೇ ಹೊರಟಾಗ ಶಿಸ್ತಿನ ಸಮಸ್ಯೆ ಎದುರಾಗಬಹುದು. ಅಂತಹ ಸಮಸ್ಯೆಗೆ ದಾರಿ ಮಾಡಬೇಡಿ.

'ಸ್ಪೆಸಿಮೆನ್' ಸಂಗ್ರಹಕ್ಕಾಗಿ ನೀವು ತರಬೇಕಾದ ವಸ್ತುಗಳೆಂದರೆ ಡಿಸೆಕ್ಷನ್ ಬಾಕ್ಸ್, ಪ್ಲಾಸ್ಟಿಕ್ ಕವರ್ಸ್, ದಾರದ ಉಂಡೆಗಳು, ಪ್ಲಾಸ್ಟಿಕ್ ಮಗ್ಸ್, ಫಾರ್ಮಲಿನ್ ದ್ರಾವಕ .. ಇತ್ಯಾದಿಗಳನ್ನು ಮರೆಯದೆ ತರಬೇಕು. ಯಾರ್‍ಯಾರು ಎಷ್ಟು ಬಗೆಯ ಸ್ಪೆಸಿಮನ್ ಸಂಗ್ರಹಿಸುತ್ತೀರೋ ನೋಡೋಣ. ಅಲ್ಲದೆ ಹೆಚ್ಚು ಸ್ಪೆಸಿಮನ್‌ಗಳನ್ನು ಸಂಗ್ರಹಿಸುವವರಿಗೆ ಕಾಲೇಜಿನ ವತಿಯಿಂದ ಬಹುಮಾನ ನೀಡುತ್ತೇವೆ. ಆದ್ದರಿಂದ ಪ್ರಿಯ ವಿದ್ಯಾರ್ಥಿಗಳೇ ಈ ಪ್ರವಾಸವನ್ನು ಒಂದು ಚಾಲೆಂಜ್ ಆಗಿ ತೆಗೆದುಕೊಳ್ಳಿ" ಎಂದಳು.

ಮರುದಿನವಸದಿಂದಲೇ ನಮ್ಮ ವಿದ್ಯಾರ್ಥಿಗಳು ಶಸ್ತ್ರಾಸ್ತ್ರ ಸಂಗ್ರಹದಂತೆ ತಮ್ಮ ದಿಗ್ವಿಜಯ ಯಾತ್ರೆಗೆ ಪ್ರಯೋಗ ಶಾಲೆಗೆ ಬೇಕಾಗಬಹುದಾದ ಮತ್ತು ಲೀಲಾ ಮೇಡಂ ಹೇಳಿದ ವಸ್ತುಗಳ ಸಂಗ್ರಹದ ಭರ ಭರಾಟೆಯಲ್ಲಿ ತೊಡಗಿಸಿಕೊಂಡರು.

ಬಿಡವಿನ ವೇಳೆ ಸಿಕ್ಕರೆ ಸಾಕು ; ಅಂಡಮಾನದ ಕತೆಯೇ ಸುಳಿದಾಡುತ್ತಿತ್ತು. ನನ್ನ ವಿಭಾಗಕ್ಕೆ ಲಗ್ಗೆ ಹಾಕಿದ ವಿಜ್ಞಾನದ ವಿದ್ಯಾರ್ಥಿಗಳು ನನ್ನೊಡನೆ ಚರ್ಚೆಗೆ ಇಳಿದರು.

"ಮೇಡಂ ನೀವೂ ಬರುತ್ತಿರುವುದು ನಮಗೆ ಬಹಳ ಖುಷಿಯಾಗಿದೆ. we will have nice time madam!" ಎಂದ ಒಬ್ಬ ಕನ್ನಡ ಬಂದೂ ಬಾರದ ಹುಡುಗ.

"ನಿಮಗೆ ಕತೆ, ಕಾದಂಬರಿ, ಕವಿತೆ ಬರೆಯೋಕೆ ಒಳ್ಳೇ ಚಾನ್ಸ್ ಅಲ್ವೆ ಮೇಡಂ?" ಎಂದಳು ಮತ್ತೊಬ್ಬ ಹುಡುಗಿ.

"ಮೇಡಂ ನೀವು ಕವಿತೆ ಬರೆದು ನಮಗೆಲ್ಲ ಓದಿ ಹೇಳಬೇಕು" - ಎಂದಳು ಇನ್ನೊಬ್ಬಳು.

ಎಲ್ಲರ ಮಾತಿಗೂ ಹೂಂ ಗುಟ್ಟಿದೆ. ಅವರೆಲ್ಲರಿಗೆ ನನ್ನ ಬಗ್ಗೆ ತಳೆದ ಅಭಿಮಾನಕ್ಕೆ ಥ್ಯಾಂಕ್ಸ್ ಹೇಳಿದೆ.

"ಹೌದು ಮಕ್ಕಳೇ ನೀವಂದಂತೆ ನನಗೆ ಆ ಪ್ರದೇಶ ಕವಿತೆ ಮೂಡಿಸುವಷ್ಟು ಪ್ರಭಾವ ಬೀರಿದರೆ ಖಂಡಿತ "ಅಂಡಮಾನದ ಕವಿತೆಗಳು" ಎಂಬ ಕವನ ಸಂಕಲವನ್ನು ತಂದೇ ತರುತ್ತೇನೆ. ಆದರೆ ಅದಕ್ಕಿಂತ ಹೆಚ್ಚಾಗಿ ಆ ಅಗಾಧ ಕಡಲಿನೆದೆ ಸೀಳಿಕೊಂಡು ಸಾಗುವ ನಮ್ಮ ಪಯಣದ 'ಥ್ರಿಲ್ಲ್'ನ್ನು ಊಹಿಸಿಕೊಂಡು ನೆಮ್ಮದಿಯಾಗಿ ನಿದ್ದೆ ಮಾಡಿ. ನಮ್ಮ ಅನುಭವ ಕಾವ್ಯವಾಗಲಿ" ಎಂದೆ.

ಆ ಗುಂಪಿನಲ್ಲಿದ್ದ ಮತ್ತೊಬ್ಬ ಹುಡುಗಿ "ಮೇಡಂ ನೀವು ಹಡಗಿನ ಪ್ರಯಾಣ ಮಾಡಿದ್ದೀರಾ? .. ನಿಮಗೆ ಭಯ ಆಗೊಲ್ವಾ ? ... ನಂಗಂತೂ ನೀರು ಕಂಡರೇನೇ ಭಯ ... ಆದರೂ ನೋಡಬೇಕೂ ಅನ್ನೋ ಆಸೆಗೆ ಬರ್ತಿದ್ದೀನಿ ... ಹೆದರಿಕೆ ಏನೂ ಇಲ್ಲಾ ಅಲ್ವಾ? ... ಎಂದು ಸಂಶಯ ಹೆದರಿಕೆಗಳಿಂದಲೇ ಕೇಳಿದಳು. ನಾನು ಗಹಗಹಿಸಿ ನಕ್ಕು ಬಿಟ್ಟೆ. 'ಸಿಲ್ಲಿ ಹುಡುಗಿ', ಅಷ್ಟೊಂದು ಹೆದರಿಕೆ ಇದ್ದರೆ ಬರ್ತಿ ಯಾಕೆ? .. ಓಹ್ .. ನಿನಗೇನು ಗೊತ್ತು ಹಡಗಿನ ಪ್ರಯಾಣದ ಮಜ. ಪ್ರಪಂಚದಲ್ಲಿ ಎಲ್ಲರೂ ತಿಂಗಳುಗಟ್ಟಲೆ ಹಡಗಿನಲ್ಲಿ ಪ್ರಯಾಣ ಮಾಡ್ತಾರೆ ... ನಾವು ಜುಜುಬಿ ಮೂರು ದಿವಸ ಅಷ್ಟೆ! ಅದೇನು ಮಹಾ! ವಿಸ್ತಾರವಾದ ಕಡಲು ... ಆಗೊಮ್ಮೆ ಈಗೊಮ್ಮೆ ಎದ್ದು ಹಡಗನ್ನು ತೂಗುವ ನೀಲಿ ಅಲೆಗಳ ಪುಟ್ಟ ಪುಟ್ಟ ಬೆಟ್ಟಗಳು ... ನೊರೆತೆರೆಗಳ ಚುಂಬನ ... ದೂರ ದಿಗಂತದಲ್ಲಿ ಕೆಂಪೆರಚಿ ಮೂಡಿ ಮುಳುಗುವ ಸೂರ್ಯ ! ... ಕ್ಷಣ ಕ್ಷಣಕ್ಕೂ ಬದಲಾಗಿ ಬಣ್ಣ ಬಣ್ಣವಾಗಿ ಕಾಣುವ ತಿಳಿನೀಲಿಯಾಗಸ ...!! ಹೇಳುತ್ತಾ ಹೋದರೆ ... ಕೊನೆಯೆಲ್ಲಿ? ... ಇದೆಲ್ಲಾ ನಮ್ಮ ಪಾಲಿಗೆ ಸಿಗುವ ಅದೃಷ್ಟ, ಊಹಿಸಿಕೊಳ್ಳಿ"-ಎಂದೆ ಭಾವ ತನ್ಮಯತೆಯಿಂದ.

ನನ್ನ ಮಾತು ಮುಗಿಯುತ್ತಿದ್ದಂತೆಯೇ ಅವರನ್ನು ಹುಡುಕಿಕೊಂಡು ಎರಡನೇ ಬಿ.ಎಸ್ಸಿ ಹುಡುಗ ಸುಧೀರ ಬಂದ. ಅವನಿಗಂತೂ ನನ್ನ ಮೇಲೆ ಅಭಿಮಾನ ಜಾಸ್ತಿ. ನನಗೆ ಕವಿತೆ ಬರೆಯುವ ಹವ್ಯಾಸ ಅವನಿಗೂ ಗೊತ್ತು. ಅದಕ್ಕೇ ಅವನೆಂದ - "ಮೇಡಂ ನಿಮಗೆ ಕವಿತೆ ಬರೆಯುವುದಕ್ಕೆ ಬೇಕಾದಷ್ಟು ವಸ್ತು ಸಿಗುತ್ತೆ ಅಲ್ವಾ ? ...

ನಿಮ್ಮ ಕವಿತೆಗಳನ್ನು ನಮಗೆ ಉಡುಗೊರೆಯಾಗಿ ನೀಡಬೇಕು' - ಎಂದ.

ಹೌದು, ಆ ಸೌಂದರ್ಯ, ಆದರ ಪ್ರಶಾಂತತೆ - ಎಲ್ಲವೂ ನನ್ನ ಸ್ಫೂರ್ತಿಯನ್ನು ಕೆರಳಿಸುತ್ತದೆ. ನಾನು ಕವಿತೆಗಳನ್ನು ಬರೆಯಲೇಬೇಕು. ಒಂದು ಕ್ಷಣವೂ ನನ್ನ ಅನುಭವದಿಂದ ವಂಚಿತವಾಗಬಾರದು - ಎಂದು ಮತ್ತೊಮ್ಮೆ ನಿರ್ಧರಿಸಿದೆ.

ನಮ್ಮ ಮಾತಿನಲ್ಲಿ ತರಗತಿ ಗಂಟೆ ಒಡಿಯುತ್ತಿದ್ದುದೂ ಎಷ್ಟೋ ಸಲ ಮರೆತು ಹೋಗುತ್ತಿತ್ತು!

ನೀರು, ಹಡಗಿನ ಪ್ರಯಾಣವೆಂದರೆ ಹೆದರಿದ್ದ ಕಸ್ತೂರಿಗೆ ಧೈರ್ಯ ಹೇಳಿದೆ. (ನನಗೇ ಮೊದಲಿಗೆ ಧೈರ್ಯವಿರಲಿಲ್ಲ!) ಎಷ್ಟೋ ಅನುಭವವಿರುವವಳಂತೆ ಹಡಗಿನ ಯಾತ್ರೆಯ ಬಗ್ಗೆ ಉದ್ದುದ್ದ ಭಾಷಣ ಕೊರೆದೆ ; ಕೊರೆಯುತ್ತಲೇ ಇದ್ದೆ.

ನವೆಂಬರ್ ತಿಂಗಳಿಂದ ಡಿಸೆಂಬರ್ ತಿಂಗಳವರೆಗೆ ನಮಗೆ ಚಳಿಗಾಲದ ರಜೆ. ಹಿತವಾದ ಕಾಲ. ಹೆಚ್ಚು ಮಳೆಯೂ ಇರುವುದಿಲ್ಲ. ಹವಾಮಾನದ ಪೂರ್ವ ಸೂಚನೆಯಂತೆ ಯಾವುದೇ ಚಂಡಮಾರುತದ ಭೀತಿಯೂ ಇರಲಿಲ್ಲ. ಹಾಗಾಗ, ನವೆಂಬರ್ 10 ಕ್ಕೆ ಬೆಂಗಳೂರಿನಿಂದ ಮದ್ರಾಸಿಗೆ ಹೊರಡುವುದು. ಅಲ್ಲಿಂದ 12ನೇ ತಾರೀಖು ಬೆಳಿಗ್ಗೆ 7.30 ಕ್ಕೆ ಮದ್ರಾಸ್ ಬಂದರಿನಿಂದ ಹಡಗನ್ನು ಹತ್ತುವುದು – ಎಂದು ನಿಷ್ಕರ್ಷೆಯಾಯಿತು. ಒಂದು ದಿನ ಮುಂಚಿತವೇ ಹೋಗಿ 'ಷಿಪ್ಪಿಂಗ್ ಕಾರ್ಪೊರೇಷನ್ ಆಫ್ ಇಂಡಿಯಾ' ಆಫೀಸಿನಲ್ಲಿ ನಮ್ಮ ಟಿಕೆಟ್ಟುಗಳನ್ನು ಸಂಗ್ರಹಿಸಬೇಕಿತ್ತು. ನಮ್ಮ ನಮ್ಮ ಸ್ಥಳಗಳನ್ನೇನೋ ಮೊದಲೆ ಕಾದಿರಿಸಲಾಗಿತ್ತಾದರೂ ಟಿಕೆಟ್ಟುಗಳನ್ನು ಮಾತ್ರ ಕೇವಲ ಒಂದು ದಿನ ಮುಂಚಿತವಾಗಿ ನೀಡುತ್ತಿದ್ದರು. ಕೊನೆಯ ಗಳಿಗೆಯಲ್ಲಿ ಕಾರ್ಯಕ್ರಮದಲ್ಲಿ ಏನಾದರೂ ಬದಲಾವಣೆಯಾಗ ಬಹುದೆಂಬ ಕಾರಣಕ್ಕಾಗಿ ಇಂತಹ ವ್ಯವಸ್ಥೆಯನ್ನು ಮಾಡಿದ್ದರು.

ಪ್ರಾಣಿ ಶಾಸ್ತ್ರ ವಿಭಾಗದವರು, ಸಮುದ್ರ ಜೀವಿ ಮಾದರಿಗಳನ್ನು ಬಗೆ ಬಗೆಯ ಹವಳಗಳನ್ನು ಸಂಗ್ರಹಿಸಬೇಕಾಗಿದ್ದುದರಿಂದ ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಅಣಿಮಾಡಿ ಕೊಂಡರು. ದೊಡ್ಡ ದೊಡ್ಡ ಬಕೇಟುಗಳು, ಒಂದೆರಡು ಬಿಂದಿಗೆಗಳು ಬಲೆಗಳು, ಸನಿಕೆಗಳು ಕ್ಲೋರೋಫಾರಂ, ಫಾರ್ಮಾಲಿನ್ ಮತ್ತು ಕೆಲವು ದೊಡ್ಡ ಬಾಯಿಯ ಮತ್ತೆ ಕೆಲವು ಚಿಕ್ಕ ಚಿಕ್ಕ ಬಾಯಿಯ ಗಾಜಿನ ಸೀಸೆಗಳು – ಮುಂತಾದವುಗಳನ್ನೆಲ್ಲಾ ಒಡ್ಡಿ ರಾಶಿ ಮಾಡಿ ಅವುಗಳನ್ನೆಲ್ಲಾ ಪ್ರತ್ಯೇಕವಾದ ಒಂದು ಬಂಡಲ್ ಮಾಡಿದರು.

ನಮಗೆ ಬೇಕಾದ ಬಟ್ಟೆ ಬರೆ ಹಾಸಿಗೆಗಳು, ಕೊಡೆಗಳು, ಮಳೆ ಕೋಟುಗಳು ಮುಂತಾದವುಗಳನ್ನೆಲ್ಲಾ ಹೊಂಚಿಕೊಂಡು ಹೊರಡುವ ದಿನವನ್ನೇ ಕಾತರ ಕಣ್ಣುಗಳಿಂದ ಎದುರು ನೋಡುತ್ತಿದ್ದೆವು. ದಿನ ನಿತ್ಯ ಏನಾದರೂ ನೆನಪು ಮಾಡಿಕೊಂಡು ಕೊಳ್ಳುವುದೇ ಆಗುತ್ತಿತ್ತು. ನಮ್ಮ ಕಲ್ಪನೆಯಲ್ಲಿ ಅದೊಂದು ಕನಸಿನ ಊರು. ಅಲ್ಲಿನ ಪ್ರದೇಶ, ಜನ, ವಸತಿ ನಮ್ಮ ಹಾಗೇ ಇರುತ್ತದೆಂಬ ನಂಬಿಕೆಗೆ ದೂರವಾದ ಭಾವನೆಗಳ ಬೆನ್ನು ಹತ್ತಿ ಯೋಚಿಸುತ್ತಿದ್ದೆವು. ನಮ್ಮ ಕನಸುಗಳು ಮುಗಿಯುವ ಹಾಗೇ ಕಾಣಲಿಲ್ಲ. ಅಂಡಮಾನಕ್ಕೆ ಹೊರಡುವ ಗಳಿಗೆಯ ನಿರೀಕ್ಷೆಯಲ್ಲಿ ಭಾವೋದ್ವಿಗ್ನ ಸ್ಥಿತಿಯಲ್ಲಿ ಹಗಲು ರಾತ್ರಿಗಳು ಗೋಡೆಯ ಮೇಲಿನ ಕ್ಯಾಲೆಂಡರನ್ನೇ ಕಾಯುತ್ತಿದ್ದೆವು. ನವೆಂಬರ್ 7,8,9 ... ಹೀಗೇ ದಿನಗಳು ಸಾಗಿದವು. 10ನೆ ದಿನಾಂಕ ನಾವು ಹೊರಡುವುದೆಂದು ನಿಶ್ಚಿತವಾಗಿತ್ತು.... ಅದಕ್ಕೇ ಅದನ್ನು ಎದುರುನೋಡುತ್ತಿದ್ದವರು... ಅಂತೂ ಇಂತೂ 10ನೇ ನವೆಂಬರ್ ಬಂದೇ ಬಂತು ... ಎಲ್ಲರಿಗೂ ಹೇಳಿಕೊಳ್ಳಲಾಗದ ಉತ್ಸಾಹ ಸಂಭ್ರಮ – ಏನು ಮಾಡುವುದಕ್ಕೂ ತೋಚುತ್ತಿರಲಿಲ್ಲ. ಇಂತಹ Excitement ನಿಂದಾಗಿ.

* * * * *

## ಹೊರಟೇ ಬಿಟ್ಟೆವು : –

ರಾತ್ರಿ 8 ಗಂಟೆಗೆ ಬೆಂಗಳೂರು ರೇಲ್ವೆ ಸ್ಟೇಷನ್‌ನ ಮದ್ರಾಸ್ ಗೇಟ್ ಕಡೆಗಿರುವ ಪ್ಲಾಟ್ ಫಾರಂನಲ್ಲಿ ಎಲ್ಲರೂ ಸೇರುವುದೆಂದು ಮೊದಲೇ ಪ್ರವಾಸಿ ತಂಡಕ್ಕೆ ತಿಳಿಸಲಾಗಿತ್ತು. ಮದ್ರಾಸ್‌ಗೆ ಟ್ರೈನ್ ಇದ್ದದ್ದು 10.15 ಕ್ಕೆ, ಆದರೂ ನಮ್ಮ ಆತುರ ಕಾತರಗಳು 7.45 ಕ್ಕೇ ಇಡೀ ತಂಡ ತಮ್ಮ ತಮ್ಮ ಬಂಧು ಬಳಗ, ತಂದೆ ತಾಯಿಗಳೊಂದಿಗೆ ಹಾಜರಿತ್ತು. ನಮ್ಮ ಸಂಭ್ರಮ ನೋಡುವವರ ಹೊಟ್ಟೆ ಉರಿಸುವ ಹಾಗಿತ್ತು. ನಮ್ಮನ್ನು ಇಂತಹ ಅವಕಾಶ ದಕ್ಕಿಸಿಕೊಂಡದ್ದಕ್ಕಾಗಿ ಅಭಿನಂದಿಸುತ್ತಿದ್ದಂತೆ, ನಮಗೆ ಇನ್ನೇನು ಸ್ವರ್ಗ ಮೂರೇ ಗೇಣು ಅನಿಸಿತು.

ನಾನು ಸ್ಟೇಷನ್ ತಲುಪುವ ಹೊತ್ತಿಗೆ ನನ್ನ ಸಹೋದ್ಯೋಗಿಗಳಿಬ್ಬರೂ ಹಾಜರಿದ್ದರು. ವಿದ್ಯಾರ್ಥಿ ವಿದ್ಯಾರ್ಥಿನಿಯರ ಬಳಗವೂ ಅರಳಿದ ಮುಖಗಳಿಂದ ನನ್ನನ್ನು ಸ್ವಾಗತಿಸಿದರು. ನಾನು ಸಾಹಿತ್ಯದ ಮೇಡಂ. ಅವರೆಲ್ಲಾ ಜೀವಶಾಸ್ತ್ರ ವಿದ್ಯಾರ್ಥಿಗಳಾದರೂ ಭಾಷಾ ವಿಷಯಕ್ಕೆ ಎಲ್ಲ ವಿದ್ಯಾರ್ಥಿಗಳೂ ಸೇರುತ್ತಿದ್ದುದರಿಂದ, ಅವರೆಲ್ಲ ನನಗೆ ಅಪರಿಚಿತರೆನಿಸಲಿಲ್ಲ. ಹಾಗೆ ನೋಡಿದರೆ Language ಮೇಡಂಗೇ ಹೆಚ್ಚಿನ ವಿದ್ಯಾರ್ಥಿಗಳ ಮುಖ ಪರಿಚಯವಿರುತ್ತಿತ್ತು. ಯಾಕೆಂದರೆ ಪ್ರಥಮ ಭಾಷೆ ಎಲ್ಲರಿಗೂ ಖಡ್ಡಾಯವಾಗಿತ್ತು. ಹಾಗಾಗಿ ನನಗೇನೂ ಪರಕೀಯತೆಯ ಅನುಭವ ಆಗಲಿಲ್ಲ. ಒಂದಿಬ್ಬರು ವಿದ್ಯಾರ್ಥಿಗಳಿಗೆ ಅದೇಕೋ ಏನೋ ನನ್ನ ಬಗ್ಗೆ ವಿಶೇಷವಾದ ಅಭಿಮಾನವಿತ್ತು. ಅದಕ್ಕೆಂದೇ ನನ್ನನ್ನು ಕಾಣುತ್ತಿದ್ದಂತೆ, ನನ್ನ ಸಹೋದ್ಯೋಗಿಗಳನ್ನು ಸುತ್ತುಗಟ್ಟಿ ನಿಂತಿದ್ದವರು ಗುಂಪಿನಿಂದ ಆಚೆ ಬಂದು ನೇರವಾಗಿ ನನ್ನ ಬಳಿಗೆ ಬಂದು ಕೇಳಿದರು.

'ಮೇಡಂ ಬನ್ನಿ ನಮ್ಮ ತಂದೆ ತಾಯಿ ತಮ್ಮನ್ನು ಕಾಣಬೇಕೆನ್ನುತ್ತಾರೆ. ಎಂದಳು. ಈಗ ನಾನು ಜವಾಬ್ದಾರಿ ಹೊತ್ತವಳು. ನಾವು ಮೂರು ಮಂದಿಯ ಸುಪರ್ದಿನಲ್ಲಿ ವಿದ್ಯಾರ್ಥಿಗಳಿದ್ದರು. ಅವರ ಕಷ್ಟ ಸುಖ, ಅವರಿಂದ ಒದಗುವ ತಂಟೆ ತಕರಾರು, ಕಾಟ, ಕೀಟಲೆಗಳೆಲ್ಲಕ್ಕೂ ನಾವೇ ಜವಾಬ್ದಾರರು. ಆ ಹುಡುಗಿ ತಂದೆ ತಾಯಿಯರು ನನ್ನನ್ನು ಕಾಣಬೇಕೆಂದಾಗ, ನನ್ನಲ್ಲಿ ಇನ್ನಷ್ಟು ಹಿರಿತನ ಜವಾಬ್ದಾರಿ ಭಾವನೆ ಮೂಡಿತು. ನಾನೇ ಅವರಿದ್ದಲ್ಲಿಗೆ ಹೊರಟೆ.

"ನಮಸ್ಕಾರ ಮೇಡಂ, ನಮ್ಮ ಸುಮತಿ ನಿಮ್ಮ ಬಗ್ಗೆ ತುಂಬಾ ಹೇಳಿದ್ದಾಳೆ. ನಿಮ್ಮನ್ನು ಕಂಡರೆ ಅವಳಿಗೆ ತುಂಬ ಅಭಿಮಾನ. ಹಾಗೆ ನೋಡಿದರೆ ನೀವು ಬರೋದು ಗೊತ್ತಾದ ಮೇಲೇನೇ ಅವಳೂ ಹೊರಡೋ ನಿರ್ಧಾರ ಮಾಡಿದ್ದು" – ಎಂದರು.

ನನಗೆ ಅವರ ಮಾತು ಕೇಳಿ ಹೆಮ್ಮೆ ಅನಿಸಿತಾದರೂ ನನ್ನನ್ನು ಹೊಗಳಿ ಅಟ್ಟಕ್ಕೆ ಕೂರಿಸುವುದು ಯಾತಕ್ಕೋ ಎಂದು ಸಂಶಯ ಬಂದರೂ – ನನ್ನಂತಹವಳಿಂದ ಅವರಿಗೆ ಏನು ಪ್ರಯೋಜನವಾಗಲು ಸಾಧ್ಯ? ಅವರ ಮಾತು ನಿಜವೇ ಇರಬಹುದು – ಅಂದುಕೊಂಡೆ.

'ಹೌದು ಸುಮತಿ ಬಹಳ ಒಳ್ಳೇ ಹುಡುಗಿ, ಏನೂ ತಿಳಿಯೊಲ್ಲ'– ಕಾಲೇಜಿನಲ್ಲಿ ಎರಡನೆ ಬಿ.ಎಸ್ಸಿ ತರಗತಿಯಲ್ಲಿದ್ದರೂ ಮಗುತನವೇ ಕಾಣುತ್ತಿತ್ತು. ಕಾಣುವ ಮಗುತನ

ಎಷ್ಟು ನಿಜ, ಎನ್ನುವುದು ಮಾತ್ರ ನನಗೆ ತಿಳಿದಿರಲಿಲ್ಲ.

'ನೋಡಿ, ಅವಳಿಗೆ ಸಮುದ್ರ, ನೀರು ಎಂದರೆ ಬಹಳ ಹೆದರಿಕೆ. ಅಲ್ಲದೆ ಮನೆಬಿಟ್ಟು ಇಲ್ಲಿಯವರೆವಿಗೆ ಒಬ್ಬಳನ್ನೇ ಎಲ್ಲಿಗೂ ಕಳಿಸಿಲ್ಲ. ಆದರೆ ಇಂತಹ ಅವಕಾಶ ಅಪರೂಪ ಎನಿಸಿದ್ದಕ್ಕೆ, ಮತ್ತು ನೀವೆಲ್ಲ ಜೊತೆಗೆ ಇರ್ತೀರಿ ಅಂತಲೇ ಕಳಿಸ್ತಿದ್ದೀವಿ. ದಯವಿಟ್ಟು ಅವಳನ್ನು ಸ್ವಲ್ಪ ಜಾಗ್ರತೆಯಾಗಿ ನೋಡಿಕೊಳ್ಳಿ ...ನಿದ್ದೆಯಲ್ಲಂತೂ ಬಹಳ ಬೆಚ್ಚಿ ಬೀಳ್ತಾಳೆ. ಒಬ್ಬಳನ್ನೇ ಮಲಗೋಕೆ ಬಿಡಬೇಡಿ' – ದೈನ್ಯ ಯಾಚನೆಯಾಗಿತ್ತು !

ಇಷ್ಟು ದೊಡ್ಡ ಹುಡುಗಿ ಅಮ್ಮನ ಪಕ್ಕ ಬಿಡ್ತಿರಲಿಲ್ಲವಂತೆ ! ಸರಿ ನಾನೇ ಅವಳಿಗೆ ಅಮ್ಮ ಆದ್ರೆ ಆಯ್ತು' ಅಂದು ಕೊಂಡೆ.

'ಛಿ ! ಛಿ ! ನೀವೆಲ್ಲ ಹೀಗೆ ಬೇಡಿಕೊಳ್ಳಬೇಕಾದ್ದಿಲ್ಲ. ಇವಳಾಗಲೀ, ಬೇರೆಯಾರೇ ಆಗಲಿ ನೋಡಿಕೊಳ್ಳಬೇಕಾದ್ದು ನಮ್ಮ ಜವಾಬ್ದಾರಿ ! ನೀವೇನು ಹೆದರ ಬೇಕಾಗಿಲ್ಲ. ಸಮುದ್ರ ಪ್ರಯಾಣ, ಈಗೇನು ಸರ್ವೇ ಸಾಧಾರಣ ! ಬೆಂಗಳೂರು ಮೈಸೂರಿಗೆ ಹೋಗೋಷ್ಟು ಸರಳ, ಸುಲಭ – ನೂರಾರು ಸಲ ಸುತ್ತಿ ಬಂದವಳಂತೆ ಎಂದೆ ನೀವು ನಿಶ್ಚಿಂತೆಯಿಂದ ಇರಿ. ನಮ್ಮ ಜೊತೆ ಸೇರಿ ಬೇಕಾದಷ್ಟು ಧೈರ್ಯ ಕಲ್ತಕೋತಾಳೆ. ಆಮೇಲೆ ನೋಡ್ತಿರಿ, ಅವಳಿಂದಲೇ ನಾವು ಧೈರ್ಯ ಕಲೀಬೇಕಾಗುತ್ತೆ ... ಅವಳತ್ತ ತಿರುಗಿ, ಹೌದಲ್ಲ ಸುಮ? – ಎಂದೆ ನಗುತ್ತ.

ಅಷ್ಟರಲ್ಲಿ ಬೇರೆ ಹುಡುಗರೆಲ್ಲ ನಮ್ಮ ಕಡೆ ತಿರುಗಿ ಮುಸಿ ಮುಸಿ ನಗುತ್ತಿದ್ದರು. ಅವರ ನೋಟ, ಅವರ ನಗು ನೋಡಿ, ನನಗೆ ಖಾತರಿಯಾಯ್ತು – ರಾತ್ರಿಗೆ ಏನಾದರೂ ಚೇಷ್ಟೆಗೆ ಹೊಂಚು ಹಾಕ್ತಾರೇಂತ?

'ಸುಮ ನೋಡು, ನೀನು ಹೆದರಿದಂತೆ ತೋರಿಸಿಕೊಂಡಷ್ಟೂ ನಿನಗೇ ತೊಂದರೆ. ಹುಡುಗರು ಸುಮ್ಮನೆ ಬಿಡೋಲ್ಲ' ಎಂದು ತಿಳಿಸಿ ಹೇಳುತ್ತಿರುವಷ್ಟರಲ್ಲಿ, ನನ್ನ ಗೆಳತಿ ಕರೆದಳು. ಮತ್ತೊಮ್ಮೆ ಅವರಿಗೆ ಧೈರ್ಯ ಹೇಳಿ ನಾನು ಅಲ್ಲಿಂದ ಹೊರಟೆ.

'ಏನೇ ವಿಜಿ, ಅಷ್ಟು ಹೊತ್ತು ತಲೆ ತಿಂದರಲ್ಲ !' ಅಂದಳು. 'ಅಯ್ಯೋ ಅದು ಮಾಮೂಲೇ ! ಸ್ವಲ್ಪ ಎಳಸು ಹುಡುಗಿ' – ಅಂದೆ.

ದೂರದಿಂದ ಗಾಡಿಯ ಸೀಟಿ ಕೇಳಿಸಿತು. ಇದ್ದಕ್ಕಿದ್ದಂತೆ ಎಲ್ಲರೂ Attention ಸ್ಥಿತಿಗೆ ಬಂದರು. ಹುಡುಗರು ಅದು ಇದು ಕೊಳ್ಳೋಕೆ ಓಡಾಡುತ್ತಿದ್ದರು. ಮನೆಯಿಂದ ತಂದಿರೋ ವಸ್ತುಗಳು, ತಿಂಡಿಗಳು ಸಾಲದು ಅಂತ ಸ್ಟೇಷನ್‌ನಲ್ಲಿದ್ದ ಸಾಲು ಅಂಗಡಿಗಳಿಗೆ ಧಾಳಿ ಮಾಡಿದ್ದರು. ನನಗೆ ಯಾವಾಗಲೂ ಸ್ವಲ್ಪ ಗಾಭರಿ. ಗಾಡಿ ಬಂದ್ಬಿಡ್ತಿದೆ. ಅಯ್ಯೋ, ಹಾಳಾದವರು, ಎಲ್ಲಿ ಸಾಯ್ತಾರೋ ಅಂದು ಬೈದುಕೊಳ್ಳುತ್ತಿರುವಷ್ಟರಲ್ಲಿ ನನ್ನ ಗೆಳತಿ ಹೇಳಿದಳು.

'ನಮ್ಮದಲ್ಲಾಂತ ಕಾಣುತ್ತೆ. ಇನ್ನೂ ಅರ್ಧ ಗಂಟೆ ಇದೆ. 'ಲೇ ಈ ಹುಡುಗರನ್ನು ಇಲ್ಲಿಂದ ಹೋಗೋಕೆ ಯಾಕೆ ಬಿಟ್ಟೆ? ... ಸುಮ್ಮನೆ ತಲೆ ಹರಟೆಗಳು' ಗಾಡಿ ಬಂದ್ಬಿಟ್ಟು,

ಇವರೆಲ್ಲ ಅಲ್ಲಲ್ಲಿ ಚದುರಿ ಹೋದರೆ ಆಮೇಲೇನು ಗತಿ?' ಎಂದೆ.

ಪಕ್ಕದಲ್ಲಿಯೇ ನಮ್ಮ ಇನೊಬ್ಬರು ಸಹೋದ್ಯೋಗಿ ಪುರುಷೋತ್ತಂ ಅವರು ನನ್ನತ್ತ ಕೆಣಕುವಂತೆ ನೋಡಿದರು. ನಾನು ಕೋಪ ಮಾಡಿಕೊಳ್ಳದೆ ಗಂಭೀರವಾಗಿ **ಕೇಳಿದೆ.**

'ಯಾಕೆ ಸಾರ್ ನನ್ನ ಭಯದಲ್ಲಿ ಅರ್ಥ ಇಲ್ವಾ?' 'ಅರ್ಥ ಇಲ್ಲ ಅಂತ ಅಲ್ಲ, ಸುಮ್ಮನೆ ಸಣ್ಣದಕ್ಕೆಲ್ಲಾ ಟೆನಷನ್ ತಂದು ಕೊಳ್ತೀರಿ. ನೀವು ಸುಮ್ಮನಿರಿ, ಗಾಡಿ ಬರಲಿ, ನೋಡ್ತಿರಿ, ನಮಗಿಂತ ಮುಂಚೆ ಒಳಗೆ ಆಕ್ರಮಿಸಿ ಕೂತಿರ್ತಾರೆ ! - ನಕ್ಕು ನುಡಿದರು. ಅವರ ಮಾತು ಎಷ್ಟು ನಿಜ! ಅವರು ಹೇಳಿದ ಹಾಗೆ ಗಾಡಿ ಪ್ಲಾಟ್ ಫಾಂನಲ್ಲಿ ನಿಂತಿದ್ದೇ, ಶರವೇಗದಲ್ಲಿ ತಾ ಮುಂದು ನಾ ಮುಂದು ಅಂತ ಮುನ್ನುಗ್ಗಿ, ತಮ್ಮ ತಮ್ಮ ಸ್ಥಳಗಳನ್ನು ಕಾಯ್ದಿರಿಸಲು ಸ್ಪರ್ಧೆ ನಡೆಸಿದ್ದರು. ಎಲ್ಲರಿಗೂ ಅವರವರ ಸ್ನೇಹಿತರ ಪಕ್ಷವೇ ಬೇಕು!

ಶಾಶ್ವತವಾಗಿ ವಲಸೆ ಹೋಗುವವರಂತೆ ಹೊರಲಾರದಷ್ಟು ಹೊರೆ ಲಗೇಜು ಹೊತ್ತು ನುಗ್ಗಿ, ಪಟ್ಟಭದ್ರರಾಗಿ ಆಸೀನರಾದರು. ನಿಧಾನವಾಗಿ ನಾವೂ ಒಳಗೆ ನಡೆದೆವು, ಅವರು ಬಿಟ್ಟು ಕೊಟ್ಟರೆ ನಮಗೆ ಜಾಗ. ಪಾಪ ಹುಡುಗರಲ್ಲಿ ಸಂಸ್ಕಾರ ಇತ್ತು. ಎದ್ದೆದ್ದು ತಮ್ಮ ಜಾಗ ಕೊಡೋಕೆ ಕೆಲವರು ಮುಂದೆ ಬಂದರು. ಇಬ್ಬರು ಲ್ಯಾಬ್ ಅಸಿಸ್ಟೆಂಟ್‌ಗಳನ್ನು ಅಲ್ಲಲ್ಲಿ ಮಧ್ಯೆ ಮಧ್ಯೆ ಮಲಗಿ ಎಚ್ಚರದ ಕಣ್ಣು ಇಡಲು ಹೇಳಿದೆವು. ನಾನು ನನ್ನ ಗೆಳತಿ ಒಂದೊಂದು ಬರ್ತ್‌ನ್ನು, ಪುರುಷೋತ್ತಂ ಮೇಲಿನದನ್ನು ಹಿಡಿದರು.

ಒಂದೇ ಸಲಕ್ಕೆ ಮಳೆ ಬಂದು ನಿಂತ ಹಾಗೆ ಆಯಿತು. ಸೀಟುಗಳ ತರಾತುರಿ ಮುಗಿದಿತ್ತು. ಆದರೆ ಆಮೌನ, ಆ ಶಾಂತಿ ಕೇವಲ ಕೆಲವು ಗಳಿಗೆಗಳು! ನಿರಾಳವಾದ ಉಸಿರಾಟ ಕೇಳಿಸಿತು. ಇನ್ನೇನು ಹಾಯಾಗಿ ಮಲಗಿ ಬಿಡಬಹುದು ಅಂತ ಲೆಕ್ಕ ಹಾಕುತ್ತಿರುವಷ್ಟರಲ್ಲಿ ಪಕ್ಕದ ಬೋಗಿಯೊಳಗಿಂದ ಹಕ್ಕಿಗಳ ಕಲರವದಂತೆ ಮಾತಿನ ಗುಜು ಗುಜು ಪ್ರಾರಂಭವಾಯಿತು. ಜೊತೆಗೆ ಹಾಡಿ ಹೊರಡುವ ಸದ್ದು : ಲೇ ಸುಮಿ, ಲೇ ಗೌರಿ, ಲೋ ವೆಂಕೂ, ಬದರಿ, ಶಾಮು ... ಹುಷಾರು. ಹೋದ ತಕ್ಷಣ ಲೆಟರ್ ಬರೆಯಿರಿ ... ನೀರಿನ ಹತ್ತಿರ ಹೆಚ್ಚಾಗಿ ಹೋಗಬೇಡಿ. (ನೀರಿನಲ್ಲೇ ಪ್ರಯಾಣ ನಡೆಸುವಾಗ!) ... ಟೀಚರ್ಸ್ ಹೇಳಿದ ಹಾಗೆ ಕೇಳಿ, ಊಟ ತಿಂಡಿ ಸರಿಯಾಗಿ ನೋಡ್ಕೊಳ್ಳಿ ... ಗುಂಪು ಬಿಟ್ಟು ಹೋಗ್ಬೇಡಿ ... ಇತ್ಯಾದಿ ಇತ್ಯಾದಿ ಎಚ್ಚರಿಕೆ ಮಾತುಗಳು ...ಟಾ ಟಾ ಬೈಬೈ ಗಳು ...ಗಾಡಿ ಕದಲಿತು. ಒಂದಷ್ಟು ದೂರ ಹೆಜ್ಜೆಗಳೂ ಜೊತೆಯಾದವು. ಕಿಟಕಿಗಳಿಂದ ಮುಖಗಳು ಹೊರ ಚಾಚಿ ಕೊನೆಯದಾಗಿ ಕೈ ಬೀಸಿ ಬೀಳ್ಕೊಂಡರು.

ಒಂಟಿ ಪ್ರಯಾಣಕ್ಕೂ, ಗುಂಪಿನ ಜೊತೆ ಪ್ರಯಾಣ ಮಾಡುವುದಕ್ಕೂ ಇರುವ ವ್ಯತ್ಯಾಸ ಗೊತ್ತಾಯಿತು. ಮಲಗುವ ಹೊತ್ತಿನಲ್ಲೂ ನಮಗೆಲ್ಲರಿಗೂ ಏನೋ **ಸಂತೋಷ,** ಯಾವುದೋ ಜೈತ್ರ ಯಾತ್ರೆಗೆ ಹೊರಟಿದ್ದೇವೆಂಬ ಉತ್ಸಾಹ, ಸಂಭ್ರಮಗಳು....

ತರಗತಿಗಳಲ್ಲಿ ಅಸ್ಪೃಶ್ಯರಂತೆ ದೂರ ದೂರ, ಶಿಸ್ತಿನ ಬೇಲಿಯೊಳಗೆ ಕುಳಿತು ಒಳಗೊಳಗೇ ನರಳುತ್ತಿದ್ದ ಹುಡುಗ ಹುಡುಗಿಯರಿಗೆ ಈಗ ಮುಕ್ತ ವಾತಾವರಣ. ಮೈ ಛಳಿ ಬಿಟ್ಟು,

ಸ್ವಚ್ಛಂದವಾಗಿ ಹುಡುಗ ಹುಡುಗಿಯರು ಅತ್ಯಂತ ಆಪ್ತವಾಗಿ ಒಬ್ಬರಿಗೊಬ್ಬರು ಹತ್ತಿರ ಹತ್ತಿರ ಕುಳಿತು ಹರಟೆಗೆ ಇಳಿದರು. ಮಾತು ! ಮಾತು ! ಮಾತು...!.... ಪ್ರಪಂಚದ ಸಮಸ್ತ ವಿಷಯಗಳೂ ಅವರ ಚರ್ಚೆಗೆ ಕವಳವಾಯಿತು. ಪಕ್ಕದ ಬರ್ತ್‌ನಲ್ಲಿ ನಾವಿದ್ದೆವು. ಹುಡುಗರು, ಅವಕಾಶ ಸಿಕ್ಕಿದೆ enjoy ಮಾಡಲಿ ಎಂದು ಕೊಂಡು ಸುಮ್ಮನಿದ್ದೆವು. ಆದರೆ ಅವರ ಮಾತಿನ ಚಿನಕುರಳಿ, ನಗೆಯ ಕಲರವ, ಒಮ್ಮೊಮ್ಮೆ ಅಟ್ಟಹಾಸ – ಗುಸು ಗುಸು ಪಿಸು ಪಿಸುಗಳಿಗೆ ಕೊನೆ ಇರುವ ಹಾಗೆ ಕಾಣಲಿಲ್ಲ.

ಮಾತಿನ ಮೂಟೆಗಳು ಉರುಳಿದವು. ಮಾತುಗಳು ನಿಲ್ಲುವ ಹಾಗೆಯೇ ಕಾಣಲಿಲ್ಲ. ಬಗೆ ಬಗೆಯ ರಸಿಕತೆ ಇತ್ತು ; ವಿನೋದವಿತ್ತು. ಕೇಳಿದವರಿಗೆ ಕಚಗುಳಿ ಇಡುವ ಮಾತುಗಳು ಆ ... ಅವರ ಮಾತಿನ ಲಯಗಳು, ತರಂಗಗಳು ಬೋಗಿಯಲ್ಲಿ ಮಲಗಿದ್ದ ಪ್ರಯಾಣಿಕರ ಗಾಢ ನಿದ್ದೆಯ ನೀರವತೆಯ ಕೋಟೆಯನ್ನು ಸೀಳಿಕೊಂಡು ಅವರ ಕಿವಿಯ ತಮ್ಮಟೆಗಳನ್ನು ಅಪ್ಪಳಿಸುತ್ತಿದ್ದವರು. ನಮ್ಮ ವಯಸ್ಸಿಗೆ ಅರ್ಥವಾಗದ ಜೋಕುಗಳು, ಆಂತರ್ಯದ ರಹಸ್ಯಗಳು ಒಬ್ಬರಿಂದೊಬ್ಬರಿಗೆ ರವಾನೆಯಾಗಿ ಕಿಸಿ ಕಿಸಿ ಕಿಲಿ ಕಿಲಿ ನಗುವಿನಲೆಗಳನ್ನು ಎಬ್ಬಿಸಿದವು. ಮಲಗಿದ್ದವರಿಗೆ ಇವರ ಚೇಷ್ಟೆಗಳು ನಿದ್ರಾ ಭಂಗ ತರುವುದು ಸಹಜವಾಗಿತ್ತು. ಆದರೂ ಆ ವಯಸ್ಸಿನ ಉಲ್ಲಾಸ, ಉತ್ಸಾಹಗಳನ್ನು ತುಳಿದು ಹಾಕಲು ನಮಗೆ ಮನಸ್ಸು ಬರಲಿಲ್ಲ. ಅದಕ್ಕೇಂದೇ ಅವರ ಪಾಡಿಗೆ ಅವರನ್ನು ಬಿಟ್ಟು ಬಿಟ್ಟೆವು. ನಾವು ಮೂವರೂ ಮಧ್ಯ ವಯಸ್ಸಿಗೆ ಹೆಜ್ಜೆ ಇಟ್ಟವರು, ಮಾತನಾಡಲು ಏನಿರುತ್ತದೆ? ಮನೆ, ಗಂಡ, ಹೆಂಡತಿ, ಮಕ್ಕಳು, ತಪ್ಪಿದರೆ ಕಾಲೇಜಿನಾಡಳಿತ ವರ್ಗ, ಪ್ರಾಂಶುಪಾಲರು ಮತ್ತು ಅವರ ಅಧಿಕಾರಶಾಹಿ ಮನೋಭಾವ, ನಮ್ಮ ನಮ್ಮ ವಿಭಾಗಗಳಲ್ಲಿನ ಉಳಿದ ಸಹೋದ್ಯೋಗಿಗಳು – ಹೀಗೆ ಹೀಗೇ ... ನೂರೆಂಟು ವಿಷಯಗಳನ್ನೂ ನೆನಪು ಮಾಡಿಕೊಳ್ಳುತ್ತಿದ್ದೆವು. ಅಷ್ಟರಲ್ಲಿ ಅದೆಲ್ಲಿಂದ ಪ್ರತ್ಯಕ್ಷನಾದನೋ ಮಹಾನುಭಾವ ! .. ಟಿಕೆಟ್ ಕಲೆಕ್ಟರ್ ಅವತರಿಸಿ ರಸ ಭಂಗ ಮಾಡಿದ. ನಮ್ಮ ಹುಡುಗರ – ಅಲ್ಲಲ್ಲ ನಾವು ಕರೆ ತಂದಿದ್ದ ವಾನರ ಸೈನ್ಯದ ಮಂಗಾಟಗಳು, ಮಾತುಗಳು ಆತನಿಗೆ ಕಿರಿ ಕಿರಿ ಉಂಟುಮಾಡಿರಬೇಕು. ಮುಖ ಕಿವಿಚಿಕೊಂಡೇ ನಮ್ಮೆಡೆಗೆ ಬಂದ. "ಯಾರ್‍ರೀ ಈ ಹುಡುಗರ ಜೊತೆ ಬಂದವರು?" ಎಂದು ರೇಗಿದ ದನಿಯಲ್ಲಿ ಕೇಳಿದ.

ನಾವೂ ಅಸಮಾಧಾನದಿಂದಲೇ ಉತ್ತರಿಸಿದೆವು. 'ನಮ್ಮ ಹುಡುಗರೇ !' – ಎಂದು ಲೀಲಾ ಹುಬ್ಬೇರಿಸಿ ಹೇಳಿದಳು. 'ಹೌದಾ ! ' – ಸಿಡುಕಿನಿಂದಲೇ ಟಿ.ಸಿ. ಮುಂದುವರೆದ "ನಿಮ್ಮ ಹುಡುಗರಿಗೆ ಸುಮ್ಮನಿರಲು ಹೇಳಿ. ಇಷ್ಟೊಂದು ಈ ಸರಿ ರಾತ್ರಿಯಲ್ಲಿ ಮಾತನಾಡಿದರೆ, ನಿದ್ದೆ ಮಾಡುವ ಇತರೆ ಪ್ರಯಾಣಿಕರಿಗೆ ತೊಂದರೆಯಾಗುತ್ತೆ' ಎಂದು ಹೇಳಿ ನಮ್ಮೆಲ್ಲರ ಟಿಕೇಟುಗಳನ್ನು ಪಡೆದು, ಎಣಿಸಿ ಮತ್ತೆ ತಲೆಗಳನ್ನು ಎಣಿಸಿಕೊಂಡು ಬಂದು ಸರಿಯಾಗಿದೆ ಎಂದು ಖಾತರಿಯಾದ ಮೇಲೆ ಟಿಕೇಟುಗಳನ್ನು ಹಿಂತಿರುಗಿಸಿದ. ಆದರೆ ಆತ ಅಲ್ಲಿಂದ ಕದಲಲಿಲ್ಲ. ಈಗ ಅವನ ಮುಖದಲ್ಲಿನ ಸಿಟ್ಟು ಕರಗಿತ್ತು. ಅವನಿಗೆ ಏನೆನಿಸಿತೋ ಸ್ನೇಹದ ದನಿಯಲ್ಲಿ ಕೇಳಿದ.

"ನೀವೆಲ್ಲರೂ ಕಾಲೇಜಿನ ಪ್ರವಾಸಕ್ಕೆ ಹೊರಟಿದ್ದೀರಾ?" – ಅವನ ಮೇಲೆ ನಮಗೂ ಸ್ವಲ್ಪ ಸಿಟ್ಟಿತ್ತಾದರೂ ಸೌಜನ್ಯಕ್ಕಾಗಿ "ಹೌದು" ಎಂದೆವು. ಆತ ಮೆಲ್ಲನೆ ಮಾತಿಗೆ ಆರಂಭಿಸಿ ಅದೂ ಇದೂ ಮಾತನಾಡ ತೊಡಗಿದ. ಅವನ ಸಿಟ್ಟು ಆ ಕ್ಷಣದ್ದು ಎನಿಸಿತು. ಮನುಷ್ಯ ಒಳ್ಳೆಯವನೆಂಬುದು ತಿಳಿಯಿತು. ಒಂದರ್ಧ ಗಂಟೆಯಲ್ಲಿ ಎಲ್ಲವೂ ಮರೆತು ಸ್ನೇಹದಿಂದ ಕೈ ಕುಲುಕುವಂತಾಯಿತು. ಆತ ನಗೆ ಮೊಗದಿಂದ "have nice time" ಎಂದು ಹಾರೈಸಿದ.

ಇನ್ನೇನು ಯಾರಿಂದಲೂ ತೊಂದರೆಯಿಲ್ಲ. ಹುಡುಗರು ಆರಾಮವಾಗಿ ಮಲಗಿ ಬಿಡುತ್ತಾರೆ ಎಂದು ಕೊಂಡಿದ್ದ ನಮ್ಮ ಊಹೆ ಸುಳ್ಳಾಯಿತು. ಮತ್ತೆ ನಮ್ಮ ಕಂಪಾರ್ಟಮೆಂಟ್‌ನಲ್ಲಿ ಗುಜು ಗುಜು ಶುರುವಾಯಿತು. ಲೀಲಾ ಪೇಷನ್ಸ್ ಕಳೆದು ಕೊಳ್ಳುತ್ತಿದ್ದಳು. ಹೇಳಿದಳು. – 'ಲೇ ವಿಜಿ ಹೋಗಿ ಅವರ ಬಾಯಿ ಮುಚ್ಚಿಸು ಎಂದಳು.

ನಾನೇ ಎದ್ದು ಹೋಗಿ ಎಲ್ಲರಿಗೂ ವಾರ್ನಿಂಗ್ ಕೊಟ್ಟು ಬಾಯಿ ಮುಚ್ಚಿಸಿ ತೆಪ್ಪಗೆ ಮಲಗಬೇಕೂಂತ ಗದ್ದರಿಸಿ ಹೇಳಿದೆ. ಹುಡುಗರು ವಿಧೇಯರು. ನನ್ನ ಮಾತು ಕೆಲಸ ಮಾಡಿತು. ಆದರೂ ಒಂದು ಮೂಲೆಯಿಂದ ಹೊದ್ದು ಮಲಗಿದ್ದ ಮುಸುಕಿನೊಳಗಿಂದ ನಗುವಿನ ಅಲೆ ಪ್ರಾರಂಭವಾಗಿ ಸಾಂಕ್ರಾಮಿಕದಂತೆ ಎಲ್ಲರಿಗೂ ಅಂಟಿತು. ಕಾರಣವಿಲ್ಲದೆ ನಗೋಕೆ ಶುರು ಮಾಡಿದಾಗ ನನ್ನ ಕೋಪ ನೆತ್ತಿಗೇರಿತು. ನನ್ನ ದರ್ಪ, ಅಧಿಕಾರ ತೋರಿಸಿಕೊಳ್ಳೋದಕ್ಕೆ ಒಂದು ಸಲ 'ಹೂಂಕರಿಸಿ ನುಡಿದೆ. ಏನ್ ಎಲ್ಲರೂ ತೆಪ್ಪಗೆ ಬಿದ್ಕೋತೀರೋ ಇಲ್ಲ ನನ್ನ ಕರಾಮತ್ತು ತೋರಿಸಲೋ, – Have some manners – ಎಂದು ಇಂಗ್ಲೀಷಿಗೆ ತಿರುಗಿ ನುಡಿದೆ.

ಇಡೀ ವಾತಾವರಣವೇ ಗಪ್ ಚಿಪ್ ಎನಿಸಿತು. ನನ್ನ ಜಾಗಕ್ಕೆ ನಾ ಹೋದೆ ... ಸ್ವಲ್ಪ ಹೊತ್ತಿನಲ್ಲಿಯೇ ನಿದ್ದೆಯ ಮಂತ್ರ ದಂಡ ನಮ್ಮನ್ನು ಸೋಕಿತು.

ಬೆಳಿಗ್ಗೆ ಅಂದರೆ 11ನೇ ನವೆಂಬರ್, ಸುಪ್ರಭಾತದ ಹಾರೈಕೆಯೊಂದಿಗೆ ಕಣ್ಣು ಬಿಟ್ಟಾಗ ಮದ್ರಾಸ್ ಸ್ಟೇಷನ್ ಬಂದಾಗಿತ್ತು. ಗಿಜಿ ಗಿಜಿ ಗೊಳ್ಳುತ್ತಾ ನಮ್ಮ ಹೊರೆಗಳನ್ನು ಹೊತ್ತು ಇಳಿದೆವು. ಪ್ರಾತಃ ವಿಧಿಗಳ ಆತುರ ಕೆಲವರಿಗಾದರೆ, ಕೆಲವರಿಗೆ ಬಿಸಿ ಬಿಸಿ ಕಾಫಿಯ ಶೋಧ ಎಲ್ಲೋ ಒಂದು ಕಡೆ ಕಾಫಿ ಸ್ಟಾಲು ಕಂಡದ್ದೇ ಎಲ್ಲರನ್ನೂ ಕೈಬೀಸಿ ಕರೆದೆ – ಕಿಂದರಿ ಜೋಗಿಯಾಗಿ ಮುಂದೆ ಮುಂದೆ ನಡೆದು, ಎಣಿಸಿ ಎಣಿಸಿ ಒಬ್ಬೊಬ್ಬರಿಗೂ ಕಾಫಿ ನೀಡಿದ್ದಾಯಿತು.

ಸ್ವಲ್ಪ ಉಸಿರಾಡುವಂತಾಯಿತು. ಸೋತ ಕಾಲುಗಳನ್ನು ಎಳೆದುಕೊಂಡು ಬಸ್ ಹತ್ತಿ ಇಂದಿರಾನಗರದ ವೈ ಎಂ ಸಿ ಎ ಹಾಸ್ಟೆಲ್ ಗೆ ಹೋದೆವು. ಆಗಲೇ ಎಲ್ಲ ವ್ಯವಸ್ಥೆ ಆಗಿದ್ದುದರಿಂದ ನಮಗೆ ಕಾದಿರಿಸಿದ್ದ ಕೋಣೆಗಳನ್ನು ಮುತ್ತಿದೆವು. ಆಗಲೇ 8 ಗಂಟೆಯಾಗಿತ್ತು. 10 ಗಂಟೆಗೆ ಷಿಪ್ಪಿಂಗ್ ಕಾರ್ಪೊರೇಷನ್ ಆಫೀಸಿಗೆ ಹೋಗಿ ನಮ್ಮ ಟಿಕೇಟುಗಳನ್ನು ಪಡೆಯಬೇಕಿತ್ತು.

ನಾನೂ ಲೀಲಾ (ನನ್ನ ಗೆಳತಿ) ಬೇಗ ಬೇಗನೆ ಎಲ್ಲರಿಗಿಂತ ಮುಂಚಿತವಾಗಿ

ಸಿದ್ಧವಾಗಿ, ಪುರುಷೋತ್ತಂ ಅವರಿಗೆ ಹುಡುಗರ ಜವಾಬ್ದಾರಿ ಒಪ್ಪಿಸಿ, ಮದರಾಸ್‌ನಲ್ಲಿನ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸುವಂತೆ ಹೇಳಿ, ತಿಂಡಿಗೂ ಕಾಯದೆ ಹೊರಟೆವು. ಆಫೀಸನ್ನು ಪತ್ತೆ ಹಚ್ಚುವುದಕ್ಕೆ ಸ್ವಲ್ಪ ಕಷ್ಟವಾಯಿತು. ಅವರಿವರನ್ನು ಕೇಳುತ್ತಾ ಕೇಳುತ್ತಾ ಪ್ಯಾರಿಸ್ ಕಾರ್ನರ್‌ವರೆಗೆ ಆಟೋ ಹಿಡಿದು ಅಲ್ಲಿ ಇಳಿದೆವಾದರೂ, ಷಿಪ್ಪಿಂಗ್ ಆಫೀಸ್‌ಗೆ ಸಾಕಷ್ಟು ನಡೆಯಬೇಕಾಯಿತು. ಗಿಜಿ ಗಿಜಿ ಜನಸಂದಣಿ, ಕೊಳಕು, ತಲೆ ಸುಡುವ ಬಿಸಿಲು, ಜೊತೆಗೆ ಒಳಗೆ ಹಸಿವಿನ ಬೆಂಕಿ! ಆದರೆ ನಮ್ಮ ಕೆಲಸ ನಮಗೆ ಮೊದಲು ಮುಖ್ಯವಾಗಿತ್ತು. ಮರುದಿವಸ ಹೊರಡುವ ಹಡಗಿಗೆ ಈ ದಿನವೇ ಟಿಕೇಟುಗಳನ್ನು ಸಂಗ್ರಹಿಸಬೇಕಿತ್ತು.

ನಮ್ಮ ಉಮ್ಮಳ, ತಳಮಳಗಳು ಸಾಲದೆಂಬಂತೆ, ಆಫೀಸ್ ತಲುಪಿದರೆ, ನಮ್ಮ ಟಿಕೇಟುಗಳು ಇನ್ನೂ ಸಿದ್ಧವಿರಲಿಲ್ಲ. ಅಧಿಕಾರಗಳು ಒಂದಿಬ್ಬರು, ವಿಚಾರಿಸಿದರೆ, ಅಲ್ಲಿ ಒಳಗಡೆ ಕೂತಿರಿ, ಈಗಲೇ ರೆಡಿ ಮಾಡು ಕೊಡ್ತಾರೆ, ಅಂದರು. ನಾವು ಹೋಗಿ ಕೂತೆವು. ಹತ್ತು, ಹನ್ನೊಂದು, ಹನ್ನೆರಡು, ಒಂದು ಗಂಟೆ -- ಹೀಗೆ ಗಡಿಯಾರದ ಮುಳ್ಳುಗಳು ಮುಂದೆ ಮುಂದೆ ಓಡಿದರೂ, ನಮಗೆ ಕರೆ ಬರಲೇ ಇಲ್ಲ. ನಮಗೆ ಒಂದು ಕಡೆ ಕೋಪ, ಬೇಸರ, ಹಸಿವು, ತಲೆ ನೋವು ! ಹಾಳಾದ್ದು ಹೊರಗೆ ಹೋಗಿ ಏನಾದರೂ ತಿಂದು ಬರೋಣಾಂದ್ರೆ ... ನಮ್ಮನ್ನು ... ಎಲ್ಲಾದರೂ ಕರೆದು, ನಾವಿಲ್ಲದೆ ಹೋದರೆ ಮತ್ತೆಲ್ಲಿ ಕಾಯಬೇಕೋ ಅನ್ನೋ ಹೆದರಿಕೆ ! ಆದರೆ ಸಿಡಿದು ಹೋಗುವ ತಲೆನೋವಿಗೆ ಒಂದು ಕಪ್ ಕಾಫೀನೂ ಬೇಡವೇ ? ಅಲ್ಲೇ ಜಂಟಲ್ ಮನ್ ಥರ ಕಾಣ್ತಿದ್ದ ವ್ಯಕ್ತಿಯೊಬ್ಬರು ಕಾಣಿಸಿದರು. ಅವರ ಬಳಿ ಹೇಳಿ, ನಮ್ಮ ಸರದಿ ಬಂದರೆ ದಯವಿಟ್ಟು ನಮ್ಮ ಪರವಾಗಿ ಹೇಳಿರಿ ಈಗಲೇ ಬರ್ತೀವಿ' ಅಂದದ್ದಕ್ಕೆ ಆತ ಒಪ್ಪಿಕೊಂಡ.

ಕಾಫಿ ಕುಡಿದು ಬರುವಷ್ಟು ಹೊತ್ತಿಗೆ, ನಮ್ಮ ಅದೃಷ್ಟಕ್ಕೆ ನಮಗೆ ಕರೆಬಂತು. ಹೋ ಟಿಕೀಟುಗಳನ್ನು ತೆಗೆದುಕೊಂಡು ಬಾಕಿ ಹಣ ಸಲ್ಲಿಸಿ ಧನ್ಯವಾದ ಹೇಳಿ ಬಂದೆವು. 'ನಾಳೆ ಬೆಳಿಗ್ಗೆ 6.30 ಕ್ಕೆ ಬಂದರಿಗೆ ಬಂದು ಹಾಜರಿ ಹೇಳಬೇಕು.' ಎಂದು ನೆನಪಿಸಿದರು ಅಧಿಕಾರಿ.

ಗಣೇಶನ್ ಅನ್ನುವವರೇ ನಾಳಿನ ಪೋರ್ಟ್ ಅಧಿಕಾರಿ. ಅವರನ್ನು ಕಂಡು ನಮ್ಮ ವಿಷಯವೆಲ್ಲಾ ಹೇಳಿದೆವು. ಆತ ತುಂಬ ಒಳ್ಳೆಯವನಂತೆ ಕಂಡ. ನಮ್ಮ ಬಗ್ಗೆ ಅದೇನೋ ಪ್ರೀತಿ ಸಹಾನುಬೂತಿಗಳು ಮೂಡಿದಂತೆ ಅನಿಸಿತು.

'ಮೇಡಮ್ಸ್' ಡೋಂಟ್ ವರ್‍ರಿ. ಐ ಶೆಲ್ ಹೆಲ್ಪ್ ಯು (ನೀವೇನೂ ಯೋಚಿಸಬೇಡಿ) ಟುಮಾರೋ ಐ ವಿಲ್ ಬಿ ಇನ್ ಚಾರ್ಜ್ ಆಫ್ ಎಮ್‌ಬಾರ್ಕ್‌ಮೆಂಟ್. ಐ ವಿಲ್ ಟೇಕ್ ಕೇರ್ ಆಫ್ ಯು – ಅಂದರು.

ನಮಗೆ ತುಂಬಾ ಸಂತೋಷ ಆಯ್ತು. ಇಲ್ಲಿಯವರೆಗೆ ಅನುಭವಿಸಿದ ಬೇಸರಕ್ಕೆ ತಕ್ಕ ಫಲ ಸಿಕ್ಕಿತು ಅಂದುಕೊಂಡು ನೆಮ್ಮದಿಯ ಉಸಿರಾಡಿದೆವು.

ಸಾಕಷ್ಟು ದಣಿವೆನಿಸಿದ್ದರಿಂದ, ನಾವು ಬೇರೆಯವರು ಹೋಗಿದ್ದ ಜಾಗಗಳಿಗೆ ಹೋಗದೆ

ನೇರವಾಗಿ ಹಾಸ್ಟೆಲ್ ಸೇರಿದೆವು. ಅಷ್ಟು ಹೊತ್ತಿಗೇ ನಮ್ಮ ಹುಡುಗರೆಲ್ಲ ವಾಪಸ್ ಬಂದಿದ್ದರು. ಎಲ್ಲರಿಗೂ ಬೆಳಗಿನಿಂದ ಸುತ್ತಿ ಸುತ್ತಿ ಸಾಕಾಗಿತ್ತು. ಎಲ್ಲೆಂದರಲ್ಲಿ ಹೇಗೆಂದರೆ ಹಾಗೆ ಒಬ್ಬರ ಮೇಲೊಬ್ಬರು ಬಿದ್ದುಕೊಂಡು ನಿದ್ದೆ ಹೊಡೀತಿದ್ರು. ನಾಲ್ಕೈದು ಹುಡುಗರು ಹೊರಗೆ ಟೆನ್ನಿಸ್ ಆಡುತ್ತಿದ್ದರು.

ನಾಳೆ ಬೆಳಗಾಗುವುದನ್ನೇ ದಾರಿ ಕಾಯುತ್ತ, ಸಂಜೆ ಕಳೆದವು. ಹಾಗೇ ಅಷ್ಟಲಕ್ಷ್ಮಿ ದೇವಾಲಯಕ್ಕೆ ಹೋಗಿ, ಅದಕ್ಕೆ ಹೊಂದಿಕೊಂಡಂತೆ ಇದ್ದ ಬೀಚ್‌ನಲ್ಲಿ ಸುತ್ತಾಡಿಕೊಂಡು, ದಾರೀಲಿ ಹಾಗೇ ಊಟಾನೂ ಮುಗಿಸಿಕೊಂಡು ಹಾಸ್ಟೆಲ್‌ಗೆ ಮರಳಿ, ನಾಳೆ ಬೆಳಿಗ್ಗೆಗೆ ಬೇಕಾದ ವಸ್ತುಗಳನ್ನು ಮಾತ್ರ ತೆಗೆದಿಟ್ಟುಕೊಂಡು ಎಲ್ಲ ಪ್ಯಾಕ್ ಮಾಡಿ, ಹಾಸಿಗೆ ಸೇರಿ ಕನಸುಗಳನ್ನು ಹೊದ್ದು ಮಲಗಿದರು, ಹಾಗೆಯೇ ಮಧ್ಯೆ ಮಧ್ಯೆ ನಿದ್ದೆ ಹತ್ತದೆ ಮುಲುಗಿದರು.

## ತೇಲುವ ಹಡಗಿನ ಪುಟ್ಟ ಜಗತ್ತು :-

ದೂರದಿಂದೆಲ್ಲೋ ಸೈರನ್ ಕೇಳಿಸಿತು. ನನಗೆ ಸಾಮಾನ್ಯವಾಗಿ ಎಕ್ಸೈಟ್‌ಮೆಂಟ್ ಇದ್ದಾಗ, ಹೊಸ ಜಾಗ ಆದಾಗ ನಿದ್ದೆ ಹತ್ತುವುದು ಬಹಳ ಕಷ್ಟವಾಗಿತ್ತು. ಬೆಡ್ ಲೈಟ್‌ನ ಮಂದ ಬೆಳಕಿನಲ್ಲಿ ಗಡಿಯಾರ ನೋಡಿಕೊಂಡೆ. ಆಗಲೇ ಗಂಟೆ ನಾಲ್ಕಾಗಿತ್ತು. ಲೀಲಾನ ಎಬ್ಬಿಸಿದೆ. ಆದರೆ ಕದಲಲಿಲ್ಲ. ಮತ್ತೆ ಹೊದಿಕೆ ಹಿಡಿದು ಎಳೆದೆ.

'ಏಯ್ ಏಳೇ ಗಂಟೆ ನಾಲ್ಕಾಯ್ತು. ಹುಡುಗರೆಲ್ಲ ಎದ್ದು ರೆಡಿಯಾಗೋಷ್ಟು ಹೊತ್ತಿಗೆ ತಡವಾಗುತ್ತೆ. ಅಲ್ಲದೆ ಬಾತ್ ರೂಮ್ಸ್ ಸಿಗೋದು ಕಷ್ಟ ಆಗುತ್ತೆ' ಅಂದೆ.

ಬಾತ್ ರೂಮ್ ಹೆಸರು ಕೇಳಿದ್ದೇ, ಜಿಗಿದೆದ್ದು ಕೂತಳು. ಮೊದಲೇ ಅ ಹಾಸ್ಟೆಲ್ ನಲ್ಲಿ ನೀರಿನ ಸಮಸ್ಯೆ.

ನಾವೆಷ್ಟು ಮುನ್ನೆಚ್ಚರಿಕೆ ವಹಿಸಿದರೂ, ನಮ್ಮ ಹುಡುಗರು ನಮಗಿಂತ ಬುದ್ಧಿವಂತರು. ಆಗಲೇ ಎದ್ದು ಎಲ್ಲಾ ಬಾತ್ ರೂಮ್ಸ್, ಟಾಯ್ ಲೆಟ್ಸ್ ಗುತ್ತಿಗೆ ಹಿಡಿದು ಬಿಟ್ಟಿದ್ದರು. ಆದರೆ ನೀರಿಲ್ಲದೆ ಅವರ ಪರದಾಟ ನೋಡಬೇಕಿತ್ತು. ಅರ್ಧ ಹಲ್ಲುಜ್ಜಿದ್ದಾರೆ ನೀರಿಲ್ಲ. ಸ್ನಾನಕ್ಕಿಳಿದವರು ಮೈ ಮುಖಕ್ಕೆ ಸೋಪು ಹಚ್ಚಿದ್ದಾರೆ, ನೀರಿಲ್ಲ ಇನ್ನು ಟಾಯ್‌ಲೆಟ್ಸ್ ಗೆ ಹೋದವರ ಗತಿ!!...

ನೋಡಿದ್ದೇ ಗಾಭರಿಯಾಯಿತು. ಒಬ್ಬೊಬ್ಬರು ನೀರಿಗೆ ಹುಡುಕುತ್ತಾ ಒಂದೊಂದು ದಿಕ್ಕಿಗೆ ಹೋದರು. ಕುಡಿಯುವ ನೀರನ್ನೇ ಒಂದೊಂದು ಲೋಟದಲ್ಲಿ, ಅರಬ್ಬೀ ದೇಶಗಳಲ್ಲಿ ಜಿಪುಣತನದಿಂದ ನೀರನ್ನು ಬಳಸುವಂತೆ ಬಳಸಿ, ಮುಖ ತೊಳೆದು ಶಾಸ್ತ್ರ ಮುಗಿಸಿ, ಸಜ್ಜಾಗಿ 5.30 ಕ್ಕೆ ಸಿಳ್ಳು ಹೊಡೆಯುವ ಹೊತ್ತಿಗೆ ಶಿಸ್ತಿನಿಂದ ಗೇಟಿನ ಬಳಿಗೆ ಬಂದರು. ಅಷ್ಟು ಬೆಳಗಾಗಿ ಮೂವತ್ತೈದು ಜನಕ್ಕೆ ವಾಹನ ವ್ಯವಸ್ಥೆ ಹೇಗೆ ಮಾಡುವುದೆಂದು ಚಿಂತೆಯಾಯಿತು. ನಡೆದೇ ಹೋಗುವ ಯೋಚನೆ ಮಾಡಿದೆವು. ಅಷ್ಟರಲ್ಲಿ ಯಾವುದೋ

ಒಂದು ಬಸ್ ಬಂತು. ಹುಡುಗರು ಅಡ್ಡಗಟ್ಟಿದರು. ನಾವು ಡ್ರೈವರನನ್ನು ಪ್ರಾರ್ಥಿಸಿದೆವು. ಪ್ಯಾರೀಸ್ ಕಾರ್ನರ್‌ಗೆ ಬಸ್‌ನಲ್ಲಿ ಕೇವಲ 10 ನಿಮಿಷಗಳು. ಅಲ್ಲಿ ಇಳಿದು, ಬೆಳಗಿನ ಜಾವದ ವಾಯು ಸಂಚಾರದ ಉಲ್ಲಾಸ ನಮ್ಮ ಪಾಲಿಗಾಯ್ತು. ಹುಡುಗರಿಗೂ ನಡೆಯುವುದು ಮೋಜೆನಿಸಿತು. ಹಾರ್ಬರ್ ಗೇಟಿನ ಬಳಿ ಆಗಲೇ ಒಂದು ದೊಡ್ಡ Q ಇತ್ತು. ನಮ್ಮ ಲಗ್ಗೇಜನ್ನು ಒಂದು ವ್ಯಾನಿನಲ್ಲಿ ಹಡಗಿನವರೆಗೆ ಕೊಂಡೊಯ್ಯಲು ಪರವಾನಗಿ ಇತ್ತು. ನಿಧಾನವಾಗಿ Q ಕರಗಿ ನಾವೂ ಹೋದೆವು. ಹಿಂದಿನ ದಿನ ಹೇಳಿದಂತೆ ಶ್ರೀ ಗಣೇಶ್ ಅವರು ಅಲ್ಲಿಂಯೇ ನಮಗಾಗಿ ಎದುರು ನೋಡುತ್ತಿದ್ದರು. ಮಿಲ್ಟ್ರಿ ಬೆಟಾಲಿಯನ್ ಕೂಡ ಒಂದು ಬಂದಿತ್ತು. ಹಡಗು ಹತ್ತುವುದಕ್ಕೆ ಮೊದಲು ಮೆಡಿಕಲ್ ಚಕ್ ಅಪ್ ಆಗಬೇಕಿತ್ತು. ಆದರೆ ಗಣೇಶ್ ಅವರ ಕೃಪೆಯಿಂದ, ಹಡಗು ಹತ್ತುವ Q ಮತ್ತು ಮೆಡೆಕಲ್ ಚೆಕ್ ಅಪ್ ಎಲ್ಲವೂ ತಪ್ಪಿತು. ವೈದ್ಯರ ಪ್ರಮಾಣ ಪತ್ರವೂ ಕೈಗೆ ಬಂತು. ಪ್ರಯಾಣಿಕರ ದೃಷ್ಟಿಯೆಲ್ಲವೂ ನಮ್ಮ ಗುಂಪಿನ ಮೇಲೇ ಇತ್ತು. ನಮಗೆ ದೊರೆತಿದ್ದ V.I.P. ಮರ್ಯಾದೆ ನೋಡಿ ಆಶ್ಚರ್ಯವೂ ಆಗಿರಬೇಕು.

ಬೇರೆ ಪ್ರಯಾಣಿಕರು ಹತ್ತುವುದಕ್ಕೆ ಮೊದಲು ನಮ್ಮನ್ನು ಒಳಗೆ ಬಿಟ್ಟರು. ಅಷ್ಟೂ ಜನಕ್ಕೆ ಒಂದೇ ಕಡೆ ಸೀಟುಗಳನ್ನೂ ಹೊಂದಿಸಿ ಕೊಟ್ಟರು. ನಾವು 'ಹೈಯರ್ ಬಂಕ್' ಗಾಗಿ ಟಿಕೇಟು ಕೊಂಡಿದ್ದೆವು. ಬಂಕ್ ಕ್ಲಾಸ್ ಅಂದರೆ ಹಡಗಿನ ನೆಲ. ಈ ಎರಡಕ್ಕಿಂಥ ಬಿನ್ನವಾಗಿ ಪ್ರಥಮ ದರ್ಜೆ ಕ್ಯಾಬಿನ್, ದ್ವಿತೀಯ ದರ್ಜೆ ಕ್ಯಾಬಿನ್‌ಗಳೂ ಇದ್ದವು. ಕ್ಯಾಬಿನ್‌ಗಳ ಬೆಲೆ ಬಂಕ್ ಕ್ಲಾಸ್‌ಗಿಂತ ಐದು ಪಟ್ಟು ಹೆಚ್ಚು. ವಿದ್ಯಾರ್ಥಿಗಳಿಗೆ ಹಣ ಹೊರೆಯಾದೀತೆಂದು 'ಬಂಕ್' ಸೀಟುಗಳನ್ನೇ ಬುಕ್ ಮಾಡಿದ್ದೆವು. 'ಹೈಯರ್ ಬಂಕ್'ಗೆ ಸೋಫಾಗಳಿದ್ದವು. ಅವುಗಳಿಗೆ ಹೊಂದಿಕೊಂಡಂತೆ ದೊಡ್ಡ ದೊಡ್ಡ ಕಿಟಕಿಗಳು. ಕಿಟಕಿಗಳಿಂದ ನೋಡಿದರೆ, ಬಂಗಾಳ ಕೊಲ್ಲಿಯ ಅಪಾರ ಜಲರಾಶಿ ಅದ್ಬುತ ಗಂಭೀರವಾಗಿ ಕಾಣುತ್ತಿತ್ತು! ದೂರದಲ್ಲಿ ಅದರ ಮೈಮೇಲೆ ಓಡಾಡುತ್ತಿದ್ದ ಹಡಗುಗಳು ಕೇವಲ ಕಪ್ಪು ಚುಕ್ಕಿಗಳಂತೆ ಕಾಣುತ್ತಿದ್ದವು. ಕಿಟಕಿಗಳು ಹಡಗಿನಾಚೆಗಿನ ಜಗತ್ತನ್ನು ನೋಡುವ ಕಣ್ಣುಗಳಾಗಿದ್ವು. ಕಡಲ ಮೊರೆತ ಅಲೆಗಳ ಕೆನೆತ, ದೂರ ದಿಗಂತದಲ್ಲಿನ ಮೂಡು ಮುಳುಗುವ ಆಟ ... ಕ್ಷಣ ಕ್ಷಣಕ್ಕೆ ಬಣ್ಣ ಬದಲಿಸುವ ಆಕಾಶ –ಎಲ್ಲವೂ ಯಾವುದೋ ಅನನ್ಯ ಅನುಭವಗಳನ್ನು ನಮ್ಮ ನೆನಪಿನುಡಿಗೆ ಹಾಕುತ್ತಿರುವಂತೆ ಎನಿಸಿತು.

ಲಂಗರು ಹಾಕಿದ್ದ ಹಡಗು ಮೆಲ್ಲ ಮೆಲ್ಲನೆ ಬಿಡಿಸಿಕೊಂಡು ಮಂದ ಮಂದವಾಗಿ ಗಂಭೀರವಾಗಿ ಕದಲ ತೊಡಗಿತು. ತೀರದಿಂದ ಒಂದಷ್ಟು ದೂರದ ವರೆಗೆ ನೀರಿನ ಆಳ ಇರುವ ಎಡೆಗೆ ನಮ್ಮ ಹಡಗನ್ನು ಎಳೆಯಲು 'ಬಲಶಾಲಿ' ಹೆಸರಿನ ಟಗ್ಗರ್ ಬಂತು. ನಮ್ಮ ಹಡಗಿನ ಹೆಸರು ನಾಜ್ 2. ಜೆಡ್ಡಾ ದಿಂದ ಷಿಪ್ಪಿಂಗ್ ಕಾರ್ಪೋರೇಷನ್ ಆಫ್ ಇಂಡಿಯಾ ಒಂದಷ್ಟು ವರುಷಗಳಿಗೆಂದು ಒಪ್ಪಂದದ ಮೇಲೆ ಪಡೆದಿತ್ತು. ಒಂದು ಕಾಲಕ್ಕೆ ತುಂಬಾ ಸೊಗಸಾದ ಮತ್ತು ಅತ್ಯಂತ ಆಧುನೀಕರಣಗೊಂಡಿದ್ದ ಹಡಗಾಗಿತ್ತಂತೆ!

ಸದ್ಯದ ಸ್ಥಿತಿ ಮಾತ್ರ ಪೂರ್ವ ಸ್ಥಿತಿಗೆ ತದ್ವಿರುದ್ಧವಾಗಿತ್ತು. ನಮ್ಮ ಜನಕ್ಕೆ ನಾಗರೀಕ

ಪ್ರಶ್ನೆ ಇಲ್ಲ ! ಅಂದವಾಗಿರುವ, ಅಚ್ಚುಕಟ್ಟಾಗಿರುವ ಯಾವುದನ್ನೇ ಕಂಡರೂ ಅದರ ಅಂದಗೆಡಿಸಿ, ಕೊಳಕು ಮಾಡಿ, ಹೊಲಸು ಮಾಡಿ ಮತ್ತೆ ನೋಡುವುದಕ್ಕೂ ಆಗದಂತೆ ಮಾಡುವುದರಲ್ಲೇ ಒಂದು ಥರಾ ತೃಪ್ತಿ. ಬಂಕ್ ಕ್ಲಾಸಿನ ಪ್ರಯಾಣಿಕರಿಗೆಂದು ಶೌಚಾಲಯಗಳನ್ನು, ಸ್ನಾನ ಗೃಹಗಳನ್ನು ಕೆಳಗಿನ ಡೆಕ್‌ನಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಕ್ಯಾಬಿನ್ ಕ್ಲಾಸಿನವರಿಗೆಂದು ಮೀಸಲಿದ್ದ ಇವು ಸ್ವಲ್ಪ ಮಟ್ಟಿಗೆ ಶುಚಿಯಾಗಿದ್ದವು.

ನಮ್ಮ ಹುಡುಗರು ಆಗಲೇ ಹಡಗಿನ ಮೂಲೆ ಮೂಲೆಗಳ ಅನ್ವೇಷಣೆಗೆ ತೊಡಗಿದ್ದರು. ನಮಗೇನೂ ಅಂತಹ ಆತುರವಿರಲಿಲ್ಲ. ಹೇಗಿದ್ದರೂ ಮೂರು ದಿವಸ ನಮಗೆ ಅಲ್ಲಿಯೇ 'ಜಲಸೆರೆ'. ನಿಧಾನವಾಗಿ ನೋಡಿದರಾಯಿತು' – ಎಂದು ಕೊಂಡು ಸುಮ್ಮನಿದ್ದೆವು. ಸೀಟುಗಳಲ್ಲಿ ಕುಳಿತುಕೊಳ್ಳುವುದೇ ಹಿಂಸೆಯಾಯಿತು. ಬಿಸಿಲಿನ ಝಳದ ಪ್ರಭಾವದಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇರಲಿಲ್ಲ. ಅದಕ್ಕೆಂದೇ ಹಡಗು ತೀರ ಬಿಟ್ಟು ನೀರಿನಲ್ಲಿ ಸ್ವಲ್ಪ ದೂರಚಲಿಸಿದ್ದೇ, ಹುಡುಗರು ಮೇಲಿನ ಡೆಕ್ ಹತ್ತಿದರು. ತಣ್ಣನೆಯ ಗಾಳಿಗೆ ಮೈಯೊಡ್ಡಿದರು. ಚಂಪಾ, ಸವಿತಾ, ಅನಿತಾ ಓಡೋಡಿ ಬಂದರು.

'ಮಿಸ್, ಮಿಸ್ ಡೆಕ್ ಮೇಲೆ ತುಂಬಾ ಚೆನ್ನಾಗಿದೆ. ವಂಡರ್ ಫುಲ್ ಸೀನರಿ. ಬನ್ನಿ ಮಿಸ್ ಇಲ್ಲಿ ಉಸಿರು ಕಟ್ಟುತ್ತೆ'. ಎಂದು ಒತ್ತಾಯ ಮಾಡುತ್ತಿರುವಷ್ಟರಲ್ಲಿ ಬಂದ ಇಬ್ಬರು ಹುಡುಗರು.

ಹೇಗಿದೆ ಮಿಸ್? ಥ್ರಿಲ್ಲಿಂಗ್ ಆಗಿದೆ ಅಲ್ವಾ? ನಾವೆಲ್ಲಾ ನೋಡ್ಕೊಂಡು ಬಂದಿದ್ದೇವೆ. ಎಲ್ಲ ಚೆನ್ನಾಗಿದೆ. ಆದರೆ ಟಾಯ್‌ಲೆಟ್ಸ್ ಮಾತ್ರ ಹಾರ್ರಿಬಲ್ ಆಗಿದೆ. ...ಐ ಡೊಂಟ್ ನೋ ಹೌ ವಿ ಕ್ಯಾನ್ ಮ್ಯಾನೇಜ್ ಫಾರ್ ತ್ರಿ ಡೇಸ್! – ಎಲ್ಲರ ಮನಸ್ಸಿನಲ್ಲಿ ಇದ್ದ ಭಯ, ಇವನ ಬಾಯಿಂದ ಬಂತು.

'ಲೀಲಾ ಹೇಳಿದಳು – ಬೆಟರ್ ಜಂಪ್, ಅಂಡ್ ಡೂ ಯುವರ್ ಡ್ಯೂಟೀಸ್ ಅಂಡರ್ ವಾಟರ್.

ಅವಳ ಮಾತಿಗೆ ಎಲ್ಲರೂ ನಕ್ಕರು.

ಹುಡುಗರೆಲ್ಲರಿಗೂ ಅಸಾಧ್ಯವಾದ ಅನುಭವವೊಂದು ತಮಗೆ ವಿಶಿಷ್ಟವಾಗಿ ಲಭ್ಯವಾಗಿದೆ. ಅನ್ನೋ ಹೆಮ್ಮೆ.

ಸಾಕಷ್ಟು ವಿಶಾಲವಾದ ಹಡಗು ಜೆಡ್ಡಾ ಸರಕಾರದೊಂದಿಗೆ ಒಪ್ಪಂದದ ಮೇಲೆ ಷಿಪ್ಪಿಂಗ್ ಕಾರ್ಪೊರೇಷನ್ ಆಫ್ ಇಂಡಿಯಾದವರು ಮದ್ರಾಸ್ ಪೋರ್ಟ್‌ಬ್ಲೇರ್ ನಡುವೆ ನಡೆಸುತ್ತಿದ್ದರು. ಇದಲ್ಲದೆ ಕಲ್ಕತ್ತಾದಿಂದಲೂ 'ಹರ್ಷ' ಹೆಸರಿನ ಹಡಗಿನ ಸೌಕರ್ಯ ಪೋರ್ಟ್ ಬ್ಲೇರ್‌ಗೆ ಇತ್ತು. ನಮ್ಮ ಹಡಗಿನ ಪ್ರವಾಸಿಗರ ಸಾಮರ್ಥ್ಯ ಸುಮಾರು ಎರಡು ಎರಡೂವರೆ ಸಾವಿರದವರೆಗಿತ್ತು. ಆದರೆ ಪ್ರತಿ ಸಲವೂ ಪೂರ್ಣ ಸಂಖ್ಯೆಯೇನೂ ಇರುತ್ತಿರಲಿಲ್ಲ. ಇತ್ತೀಚೆಗಂತೂ ನಷ್ಟದ ಮೇಲೇ ಹಡಗನ್ನು ನಡೆಸಲಾಗುತ್ತಿತ್ತಂತೆ. ಈ ಸಲ ಹರ್ಷ ದುರಸ್ತಿಗಾಗಿ ಉಳಿದು ಬಿಟ್ಟದ್ದರಿಂದ ಕಲ್ಕತ್ತಾದ ಪ್ರಯಾಣಿಕರೂ ಮದರಾಸಿನಿಂದಲೇ

ಹಡಗು ಹತ್ತಿದ್ದರಿಂದ ಪ್ರಯಾಣಿಕರ ಸಂಖ್ಯೆ ಜಾಸ್ತಿ ಇತ್ತು. ಜನ ಜಾಸ್ತಿಯಾದಷ್ಟೂ ಕೊಳಕು, ಓಡಾಟ, ಗಜಿಬಿಜಿ ಹೆಚ್ಚು. ಸಾಮಾನ್ಯವಾಗಿ, ವ್ಯಾಪಾರಸ್ಥರು, ಕೂಲಿಕಾರರು, ಮತ್ತೇ ಬೇರೆ ರೀತಿಯ ತೀರಾ ಕಡಿಮೆ ದರ್ಜೆಯ ಪ್ರಯಾಣಿಕರೇ ಇದ್ದರು. ಪೋರ್ಟ್ ಬ್ಲೇರ್‌ಗೆ ಇರುವ ಸಂಚಾರ ವ್ಯವಸ್ಥೆಯೆಂದರೆ ಹಡಗೊಂದೇ! ವಾಯು ಮಾರ್ಗ, ಜಲಮಾರ್ಗ. ವಾಯುಮಾರ್ಗ ಜನಸಾಮಾನ್ಯರ ಎಟುಕಿಗೆ ಮೀರಿದ್ದು. ಹಾಗಾಗಿ ತೀರಾ ಅಗ್ಗದ ಪ್ರಯಾಣ ಸೌಕರ್ಯವೆಂದರೆ ಹಡಗು ಮಾತ್ರ.

ಸಾಕಷ್ಟು ಜನ ಸಂದಣಿ ಇತ್ತು. ಎಲ್ಲೆಂದರಲ್ಲೇ ದಿಂಬು ಧಾವಳಿ, ಪಾತ್ರೆ ಪರಡಿ ಮೂಟೆಗಳು, ಬಟ್ಟೆ ಬರೆಯ ಟ್ರಂಕುಗಳು –ಬೇಕಾದಷ್ಟು ಜಾಗವನ್ನು ಆಕ್ರಮಿಸಿಕೊಂಡು ಬಿಟ್ಟಿದ್ದವು. ನೆಲದ ಮೇಲೇ ಚಾಪೆ ಅಥವಾ ಜಮಕಾನೆಗಳನ್ನು ಹಾಸಿಕೊಂಡು ಜನ ಆಗಲೇ ತಮ್ಮ ತಮ್ಮ ಸ್ಥಾನ ಭದ್ರತೆಯಲ್ಲಿ ತೊಡಗಿದ್ದರು.

ನೌಕಾ ಸೈನಿಕರ ಒಂದು ಬೆಟಾಲಿಯನ್ ಮತ್ತು ಕೆಲವು ಮಿಲ್ಟ್ರಿ ಆಫೀಸರುಗಳು ಇವರಿಗೆಲ್ಲಾ ಹಡಗಿನಲ್ಲಿ ಪ್ರತ್ಯೇಕವಾಗಿ ಒಂದು ವೃತ್ತಾಕಾರದ ಕ್ಲೋಸ್ಡ್ ಕ್ಯಾಬಿನ್ ಇತ್ತು. ಸಾಮಾನ್ಯ ಪ್ರಯಾಣಿಕರಿಂದ ಅವರನ್ನು ಬೇರ್ಪಡಿಸಲಾಗಿತ್ತು. ಇದಕ್ಕೆ ಕಾರಣ ಸಂಜೆ ರಾತ್ರಿಗಳಲ್ಲಿ ಕುಡಿಯುವುದಕ್ಕೆ ಪ್ರಾರಂಭಿಸಿ ಸಹ ಪ್ರಯಾಣಿಕರಿಗೆ ತೊಂದರೆಯಾಗಬಹುದೂಂತ. ಆ ಕ್ಯಾಬಿನ್ ಬಾಗಿಲ ಬಳಿ ಹೋದರೆ ಸಾಕು ಗಬ್ಬುನಾತ. ಮೂರು ದಿವಸ ಅವರಿಗೆ ಸ್ವರ್ಗ ಸುಖ. ಕೆಲಸ ಇಲ್ಲ ; ಕಾರ್ಯಇಲ್ಲ. ಹೊತ್ತು ಹೊತ್ತಿಗೆ ಹಡಗಿನ ಕ್ಯಾಂಟೀನ್‌ನಲ್ಲಿ ತಿಂಡಿ, ಊಟ, ಕಾಫಿ ಇತ್ಯಾದಿ ದೊರೆತಿದ್ದವು. ಹಡಗಿನಲ್ಲೇ ಒಂದು ಪುಟ್ಟದಾದ ಆಸ್ಪತ್ರೆ, ಒಂದು ವಾರ್ಡ್, ಒಬ್ಬ ಡಾಕ್ಟರು, ಒಬ್ಬ ನರ್ಸ್ – ಬೆಳಗ್ಗೆ ಸಂಜೆ ನರ್ಸ್ ಬಂದು ಆರೋಗ್ಯ ವಿಚಾರಿಸಿಕೊಂಡು ಹೋಗುತ್ತಿದ್ದರು.

ನ್ಯಾವಿಗೇಷನ್ ರೂಂ, ಇಂಜಿನ್ ರೂಮ್, ಆಫೀಸರುಗಳ ಕ್ಯಾಬಿನ್ಸ್, ಟಿ.ವಿ ರೂಮ್ ಪೈಲಟ್‌ಗೆ ಅತ್ಯಂತ ಸುಸಜ್ಜಿತ ಕೊಠಡಿ. ಇಡೀ ಹಡಗಿನ ಜವಾಬ್ದಾರಿ ಆತನ ಮೇಲೆ. ಮೆರೈನ್ ರೇಡಿಯೋ ಆಫೀಸರುಗಳು ಹವಾಮಾನದ ಸ್ಥಿತಿಗತಿಗಳನ್ನು ಬಹಳ ಸೂಕ್ಷ್ಮವಾಗಿ ದಾಖಲಿಸಿ, ಆಗಾಗ ತಿಳಿಸುವ ವ್ಯವಸ್ಥೆಯಿತ್ತು. ಹಾಗೆಯೇ ಹಡಗು ಚಲಿಸುತ್ತಿರುವ ದಿಕ್ಕನ್ನು ಮತ್ತು ಅದರ ವೇಗವನ್ನು, ಅದು ಸವೆದ ದೂರವನ್ನು ಧ್ವನಿ ವರ್ಧಕಗಳಲ್ಲಿ ಪ್ರಯಾಣಿಕರಿಗೆ ತಿಳಿಸುತ್ತಿದ್ದರು. ಒಂದು ರೀತಿಯಲ್ಲಿ ಹಡಗು ಸ್ವಯಂ ಪರಿಪೂರ್ಣವಾಗಿತ್ತು. ಒಂದು ಅಂಗಡಿ, ಬೇಕರಿಗಳು ಬೇರೆ ಇದ್ದವು. ಪ್ರಯಾಣಿಕರಿಗೆ ಬೇಕಾಗುವ ಸಣ್ಣ ಪುಟ್ಟ ಪದಾರ್ಥಗಳು, ತಿಂಡಿ ತಿನಿಸುಗಳು, ಬ್ರೆಡ್ಡು ಜಾಮ್, ಬೀಡಿ, ಸಿಗರೇಟು ಇತ್ಯಾದಿಗಳು ದೊರೆಯುತ್ತಿದ್ದವು. ಹಡಗಿನ ಕ್ಯಾಂಟೀನ್‌ನಲ್ಲಿ ಊಟಕ್ಕೆ ಮೊದಲೇ ಕೂಪನ್‌ಗಳನ್ನು ಕೊಳ್ಳಬೇಕಿತ್ತು. ಅಲ್ಲಿಯೂ ವರ್ಗ ತಾರತಮ್ಯ. ಬಂಕ್ ತರಗತಿಯ ಪ್ರಯಾಣಿಕರಿಗೆ ದೊರೆಯುವ ಊಟ ಬೇರೆ ರೀತಿಯದು. ಬಂಕ್ ಪ್ರಯಾಣಿಕರಿಗೆ ತಮ್ಮದೇ ಲೋಟ ತಟ್ಟೆಗಳನ್ನು ತೆಗೆದುಕೊಂಡು ಹೋಗಿ ತಾವಿರುವ ಜಾಗದಲ್ಲೇ ತಿನ್ನಬೇಕಿತ್ತು. ಕ್ಯಾಬಿನ್ ಪ್ರಯಾಣಿಕರು ಕ್ಯಾಂಟೀನ್ ಒಳಗೇ ಎ.ಸಿ ರೂಮ್‌ಗಳಲ್ಲಿ ಕುಳಿತು ರಾಜಮರ್ಯಾದೆಯಿಂದ ತಿಂದು

ಎದ್ದು ಬರಬಹುದಾಗಿತ್ತು. ಅವರ ಊಟದ ದರವೂ ಬೇರೆ. ಮೂರು ದಿವಸಕ್ಕೆ ಒಟ್ಟಿಗೆ ಸೇರಿ ಹಣವನ್ನು ಮೊದಲೇ ನೀಡಬೇಕಿತ್ತು.

ನಾವು ಮೇಲು ದರ್ಜೆ ಬಂಕ್ ತರಗತಿಯ ಪ್ರಯಾಣಿಕರಾಗಿದ್ದರೂ ನಮಗೆ ಕ್ಯಾಬಿನ್ ದರ್ಜ್ಯೆ ಸವಲತ್ತುಗಳನ್ನು ನೀಡಲಾಗಿತ್ತು. ವಿದ್ಯಾವಂತರು, ಕಾಲೇಜು ವಿದ್ಯಾರ್ಥಿಗಳು, ಉಪಾಧ್ಯಾಯರು ಮತ್ತೆ ನೋಡುವುದಕ್ಕೂ ಸ್ವಲ್ಪ ಮೇಲು ದರ್ಜೆಯವರು ಎನಿಸಿದ್ದರಿಂದ ಅಲ್ಲದೆ ಶಿಕ್ಷಣ ಪ್ರವಾಸಕ್ಕೇಂದು ಬಂದವರು – ಹಾಗಾಗಿ ಕ್ಯಾಂಟೀನ್ ಮ್ಯಾನೇಜರ್ ಆಗಲೇ ಬಂದು ನಮ್ಮೊಂದಿಗೆ ಸ್ನೇಹದ ಮಾತನ್ನಾಡಿ. ನಮ್ಮೆಲ್ಲರ ಊಟಕ್ಕೆ ವಿಶೇಷ ವ್ಯವಸ್ಥೆ ಮಾಡುವುದಾಗಿ ಹೇಳಿದ. ಬೆಂಗಳೂರಿನವರೇ ಆಗಿದ್ದುದು ಒಂದು ಕಾರಣ, ಮತ್ತೊಂದು ಕಾರಣ ನಮ್ಮ ಕಾಲೇಜಿನ ಕೀರ್ತಿ ಬೇರೆ ಕೇಳಿದವನಾಗಿದ್ದ. ಸುಮಾರು ವರ್ಷಗಳಿಂದ, ಮದ್ರಾಸಿನಲ್ಲಿ ನೆಲಸಿ ಹಡಗಿನಲ್ಲಿ ಕ್ಯಾಂಟೀನ್ ನಡೆಸಲು ಕಾಂಟ್ರಾಕ್ಟ್ ಹಿಡಿದಿದ್ದ. ತುಂಬಾ ಚೆನ್ನಾಗಿ ಮಾತಾಡಿ ನಮ್ಮನ್ನೆಲ್ಲಾ ಸಮ್ಮೋಹನಗೊಳಿಸಿದ.

"ನಾನೂ ನಿಮ್ಮೂರಿನವನೇ ಸಾರ್. ಬೆಂಗಳೂರಿನಲ್ಲಿ ನನ್ನ ಅಣ್ಣ ಅತ್ತಿಗೆ ಇದ್ದಾರೆ. ನಾನೂ ಆಗಾಗ ಬರ್ತ್ತಿರ್ತೀನಿ. ನೀವೆಲ್ಲಾ ನನಗೆ ಪರಿಚಯವಾದದ್ದು ತುಂಬಾ ಸಂತೋಷವಾಯ್ತು. ನೀವು ಊಟದ ಯೋಚನೇನೇ ಮಾಡಬೇಡಿ. ನಿಮಗೆಲ್ಲಾ ರಿಯಾಯಿತಿ ದರದಲ್ಲಿ ನಾನು ಒಳ್ಳೆ ಊಟ, ತಿಂಡಿ ವ್ಯವಸ್ಥೆ ಮಾಡ್ತೀನಿ. ಮೂರು ದಿವಸ ನಿಮ್ಮ ಸಹವಾಸದಲ್ಲಿ ಜಾಲಿಯಾಗಿ ಇರಬಹುದು" – ಎಂದರು.

"ಥ್ಯಾಂಕ್ಯೂ ಸಾರ್, ಸದ್ಯಕ್ಕೆ ನಮ್ಮ ಊಟದ ಚಿಂತೆಕಳೀತು. ಏನ್ ಮೇಡಂ ನಾಗರಾಜ್ ರವರು ನಮ್ಮನ್ನು ವಿಶೇಷವಾಗಿ ಆಹ್ವಾನಿಸಿದ್ದಾರೆ. ಇಟ್ ಈಸ್ ಸೋ ಗುಡ್ ಆಫ್ ಹಿಮ್" ... ಅಂದ ಹಾಗೆ ಮಿ. ನಾಗರಾಜ್ ಇವರಿಬ್ಬರೂ ನಮ್ಮ ಕೊಲೀಗ್ಸ್. ಇವರು ಲೀಲಾಂತ, ಇವರು ವಿಜಯಾಂತ – ಎಂದು ಹೇಳಿ ನಮ್ಮನ್ನು ಪರಿಚಯಿಸಿದರು.

ನಾವೂ ಪ್ರತಿ ನಮಸ್ಕಾರ ಹೇಳಿ. ಸ್ವಲ್ಪ ಅವರನ್ನು ಪೂಸೀ ಹೋಡೀಬೇಕೂಂತ ಅನ್ನಿಸಿ –'ಸಾರ್ ನಿಮ್ಮ ಕ್ಯಾಂಟೀನ್ ಊಟ, ನಮ್ಮ ಪ್ರವಾಸದ ಮರೆಯಲಾಗದ ಸವಿ ನೆನಪಾಗಬೇಕು. ನಮ್ಮ ಹುಡುಗರು ಬಹಳ ಸೂಕ್ಷ್ಮ ಪ್ರಕೃತಿಯವರು. ಇರೋ ಮೂರು ದಿವಸ ಚೆನ್ನಾಗಿ ಊಟ ಹಾಕಿಸಿ ಬಿಡಿ ಎನ್ನುತ್ತಿದ್ದಂತೆ, ನಾನೆಂದೆ–

'ಎಷ್ಟರ ಮಟ್ಟಿಗೇಂದ್ರೆ, ಹಿಂತಿರುಗಿ ಹೋದ್ಮೇಲೆ, ಮತ್ತೆ ನಿಮ್ಮ ಷಿಪ್ ಮತ್ತು ನಿಮ್ಮನ್ನು ಹುಡುಕಿಕೊಂಡು ಬರುವ ಹಾಗೇ ಆಗಬೇಕು.'

'ಓ ಅದಕ್ಕೇನಂತೆ ಖಂಡಿತವಾಗಿಯೂ, ವಾಸ್ತವವಾಗಿ ಬಂಕ್ ಕ್ಲಾಸ್ ಅವರಿಗೆ ಕ್ಯಾಬಿನ್ ಊಟ ಕೊಡೋದಿಲ್ಲ. ಆದರೆ ನೀವೆಲ್ಲಾ ಸ್ಟೂಡೆಂಟ್ಸ್‌ನ ಕರ್ಕೊಂಡು ಬಂದಿದ್ದೀರಿ. ನನಗೆ ವಿದ್ಯಾವಂತರೂಂದ್ರೆ ಬಹಳ ಅಭಿಮಾನ, ದಿನಗಟ್ಟಲೆ, ತಿಂಗಳಗಟ್ಟಲೆ ನಿಮ್ಮಂತ ಪ್ರಯಾಣಿಕರು ನಮಗೆ ಸಿಗುವುದೇ ಅಪರೂಪವಾಗುತ್ತೆ. ನೀವು ನಮ್ಮ ಗೌರವಾನ್ವಿತ ಅತಿಥಿಗಳು. ನಿಮ್ಮ ಸಂತೋಷಾನೇ ಮುಖ್ಯ.

ನೋಡ್ತಿದ್ದ ಹಾಗೇ ಆ ಮನುಷ್ಯ ಬಹಳ ಬುದ್ಧಿವಂತ, ಮಾತುಗಾರ, ವ್ಯವಹಾರ ಬಲ್ಲವನು' ಅನಿಸಿತು'.

ಗುಂಡು ಮುಖ, ದಢೂತಿ ಆಸಾಮಿ, ಸದಾ ಎಲೆ ಅಡಿಕೆಯಿಂದ ರಂಗೇರಿದ ಬಾಯಿ, ತುಟಿಗಳು. ರಾಘವೇಂದ್ರ ಸ್ವಾಮಿ ಭಕ್ತನಂತೆ ಕಂಡ. ಹಣೆ ಮೇಲೆ ಹುಬ್ಬಿನ ನಡುವೆ ಕೆಂಪು ಕುಂಕುಮ ಚುಕ್ಕಿ. ಮಡಿ ಆಚಾರವಂತನಂತೆ ತೋರಿದ. ಅದೂ ಇದೂ ಮಾತಾಡ್ತಾ ಆತ ಎಷ್ಟು ಹತ್ತಿರದವನಾಗಿ ಬಿಟ್ಟ. ಅಂದರೆ– ತನ್ನ ಖಾಸಗಿ ಬದುಕನ್ನೆಲ್ಲಾ ಹೇಳಿಕೊಳ್ಳೋಕೆ ಶುರು ಮಾಡಿದ. ಆದರೆ ಅದಕ್ಕೆ ಮುಂಚೆ ನನ್ನ ಕಡೆ ನೋಡುತ್ತಾ, ಆತ ಪುರುಷೋತ್ತಂಗೆ ಹೇಳಿದ. ಸಾರ್ ಈ ಮೇಡಂ ಏನೂ ಅಂದ್ಕೊಳ್ಳೊಲ್ಲ, ಅಂದರೆ ನಾನು ಆಕೇನ 'ಅತ್ತಿಗೆ' ಅಂತ ಕರೀತೀನಿ. ಯಾಕೆಂದರೆ ಥೇಟ್ ನನ್ನ ಅತ್ತಿಗೆ ಥರಾನೇ ಇದ್ದಾರೆ. ಕೊನೇ ಪಕ್ಷ ನಿಮ್ಮ ಸಹವಾಸದಲ್ಲಿ ಇರೋವರೆಗಾದರೂ ನನ್ನ ಅತ್ತಿಗೆ ಜೊತೆ ಇದ್ದಂತಹ ಸಮಾಧಾನ ಸಿಗುತ್ತೆ. ಏನಂತೀರಿ ಸಾರ್? – ಎಂದು ಹೇಳಿದ. ಮಾತಿನಲ್ಲಿ ಪ್ರಾಮಾಣಿಕತೆ ಇದ್ದಂತೆನಿಸಿತು. ಸಾಕಷ್ಟು ಜೋರಾಗಿಯೇ ಮಾತುಕತೆ ನಡೀತಿದ್ದುದರಿಂದ ನಾಗರಾಜ್ ರವರ ಪ್ರಾರ್ಥನೆ ಹಿಂದೆ ಮುಂದೆ ಕೂತಿದ್ದ ವಿದ್ಯಾರ್ಥಿಗಳಿಗೂ ಕೇಳಿಸಿತು. ಅವರೆಲ್ಲ ನಕ್ಕು

ವಾಟ್ ಮೇಡಂ, ನಿಮಗೆ ಸಲೀಸಾಗಿ ಒಬ್ಬ ಮೈದುನ ಸಿಕ್ಕರಲ್ಲ – 'ನೀವು ನಮಗೆ ಸ್ವೀಟ್ಸ್ ಕೊಡಿಸಬೇಕು' – ಎಂದರು.

ಅವರದ್ದು ಸಾಲದೆ, ಲೀಲಾ ಪುರುಷೋತ್ತಂ ಇಬ್ಬರೂ ಒಟ್ಟಿಗೆ ಹೇಳಿದರು. – ಹಾಗಾದರೆ ಸಾರ್, ಇಂತಹ ಒಳ್ಳೇ ಅತ್ತಿಗೇನ ಇಷ್ಟು ಸಲೀಲಸಾಗಿ ಗಿಟ್ಟಿಸಿಕೊಂಡು ಬಿಡ್ತಿದ್ದೀರಲ್ಲ – ಅದಕ್ಕೆ ಬದಲಾಗಿ ನಮಗೆಲ್ಲಾ ಫ್ರೀ ಊಟ, ತಿಂಡಿ ಸಿಗಬೇಕಪ್ಪ. ಇಲ್ಲಾಂದ್ರೆ ನಾವು ಅದಕ್ಕೆಲ್ಲಾ ಒಪ್ಪೊಲ್ಲ' ಅಂದ್ರು.

'ಆಯ್ತು ಬಿಡಿ ಸಾರ್, ಅದೇನು ಮಹಾ ದೊಡ್ಡ ವಿಷಯ' ಅತ್ತಿಗೆಗಿಂತ ಊಟ ದೊಡ್ಡದೇ' – ಎಂದು ಅವರೂ ನಕ್ಕರು.

'ಲೀಲಾ ಸುಮ್ಮನೆ ಇರಲಿಲ್ಲ'.

'ಏನೇ ವಿಜಿ, ನಿನಗೇನಮ್ಮ, ನಿನ್ನ ಮೈದುನಂದೇ ಕ್ಯಾಂಟೀನು. ನಿನಗಂತೂ ರಾಯಲ್ ಟ್ರೀಟ್‌ಮೆಂಟ್. ಆದರೆ ಒಂದು ವಿಷಯ ನೆನಪಿಟ್ಟುಕೋ, ನಿನಗೆ ಸಿಗೋದರಲ್ಲಿ ನಮಗೂ ಪಾಲಿರಬೇಕು' – ಎಚ್ಚರಿಸಿ ನುಡಿದಳು.

ನಾನು ಹುಸಿ ಮುನಿದು ಹೇಳಿದೆ.

'ಹೋಗೆ ನಿನಗೂ ಬೇರೆ ಕೆಲಸ ಇಲ್ಲ. ಏನೇನೋ ಹುಚ್ಚುಚ್ಚಾಗಿ ಮಾತಾಡ್ತೀಯಾ' ಅಂದೆ.

'ಯಾಕೋ ಅತ್ತಿಗೆಮ್ಮ ಅವರಿಗೆ ಕೋಪ ಬಂದಂತಿದೆ' – ಎಂದು ಆಗಲೇ 'ಅತ್ತಿಗೆ' ಸಂಬೋಧನೆ ಶುರು ಮಾಡಿಬಿಟ್ಟರು.

'ಸಾರ್ ಬರಬೇಕಂತೆ, ಒಳಗೆ ಕರೀತಿದ್ದಾರೆ' –ಎಂದು ಕ್ಯಾಂಟಿನ್ ಬಾಯ್ ಬಂದು ನಾಗರಾಜ್ ಅವರನ್ನು ಎಬ್ಬಿಸಿಕೊಂಡು ಹೋದರು. ಅವರು ಹೋದ ಐದು ನಿಮಿಷಗಳೊಳಗಾಗಿ ನಮಗೆ ಕರೆ ಬಂತು. ಅಷ್ಟು ಹೊತ್ತಿಗೆ ಹುಡುಗರು ಹಡಗಿನ ಮೂಲೆ ಮೂಲೆಯಲ್ಲಿ ಓಡಾಡಿ ಅನ್ವೇಷಣೆಗೆ ತೊಡಗಿದ್ದರು. ಹುಡುಗರೆಲ್ಲರನ್ನೂ ಕರೆದು ತರಬೇಕು ಅಂತ ಆದೇಶವಿದ್ದದ್ದರಿಂದ ನಮ್ಮ ಸಹಾಯಕ್ಕೆಂದು ಬಂದಿದ್ದ ರಾಜು, ನಾಗೇಂದ್ರ ಅವರನ್ನು, ಹುಡುಗರನ್ನೇಲ್ಲಾ ಪತ್ತೆ ಹಚ್ಚಿ ಕ್ಯಾಂಟೀನ್‌ಗೆ ಕರೆತರಲು ಹೇಳಿ ನಾವು ಮೂವರೂ ಹೋದೆವು.

ಹೊರಗೆ ಉಸಿರು ಕಟ್ಟುವ ಬಿಸಿಲ ಝಳವಿದ್ದರೆ, ಇಲ್ಲಿ, ಎ.ಸಿ. ಕೋಣೆ ಆದ್ದರಿಂದ ತಣ್ಣಗೆ ಹಾಯೆನಿಸುವ ಅನುಭವ. ಜೊತೆಗೆ ಫ್ರಿಜ್ ವಾಟರ್ ಬೇರೆ! ತುಂಬಾ ಹಿತವಾಗಿತ್ತು. ಪಾಪ ನಾಗರಾಜ್ ಅವರು ಆಗಲೇ ತಮ್ಮ ಔದಾರ್ಯದ ಪ್ರದರ್ಶನಕ್ಕೆ ತೊಡಗಿದ್ದರು. ಮೂವತ್ತೈದು ಮಂದಿಗೂ ರುಚಿಕರವಾದ ನಿಂಬೆ ಹಣ್ಣಿನ ಪಾನಕ ನೀಡಿದರು. ಕಾಫಿ, ಟೀಗಳು ನಿಗದಿತ ವೇಳೆ ಬಿಟ್ಟು ಬೇರೆ ಯಾವಾಗಲೂ ಸಿಗುತ್ತಿರಲಿಲ್ಲ. ಯಾಕೆಂದರೆ ಹಾಲಿಗೆ ಬಹಳ ಸಮಸ್ಯೆಯಾಗಿತ್ತು. ಹಾಲು ಮೊಸರು ಊಟಕ್ಕೆ ಸೊನ್ನೆ.

ನಾಗರಾಜರವರ ಆದರಾತಿಥ್ಯಕ್ಕೆ ನಾವು ಸಂಪೂರ್ಣ ಶರಣಾದೆವು. ಕ್ಯಾಂಟೀನ್ ಊಟಕ್ಕೆ ತಲೆಗಿಷ್ಟು ಎಂದು ಲೆಕ್ಕ ಹಾಕಿ, ಇಬ್ಬರು ಮೂವರ ಊಟಕ್ಕೆ ರಿಯಾಯಿತಿ ಕೊಟ್ಟು, ಒಂದಷ್ಟು ಹಣವನ್ನು ನಾಗರಾಜ್‌ರವರಿಗೆ ಒಪ್ಪಿಸಿದೆವು. ಊಟ ತಿಂಗಡಿಗಳು ಚೆನ್ನಾಗಿಯೇ ಇದ್ದವು. ಶಾಕಾಹಾರಿ, ಮಾಂಸಾಹಾರಿ ಊಟ ಎರಡೂ ದೊರೆಯುತ್ತಿತ್ತು. ಮಾಂಸಾಹಾರವೆಂದರೆ ಬರೀ 'ಮೀನಿನ' ಪದಾರ್ಥಗಳು ಮಾತ್ರ, ಮೀನಿನ ಪಲ್ಲೆ, ಮೀನಿನ ಸಾರು. ಮಸಾಲೆ ಹುದುಗಿದ ಮೀನು, ಮೊಟ್ಟೆಯಿಂದ ವಿವಿಧ ಪದಾರ್ಥಗಳು –ಇಷ್ಟೇ! ಶಾಕಾಹಾರವಂತೂ ಮಾಮೂಲಿಯಾಗಿ ಎರಡು ರೀತಿಯ ಪಲ್ಲೆ, ಒಂದೊಂದು ದಿನ ಒಂದೊಂದು ರೀತಿಯ ಅನ್ನ, ಬಿಳೀ ಅನ್ನ, ಹುಳಿ, ಸಾರು, ಏನಾದರೂ ಒಂದು ಸಿಹಿ ತಿಂಡಿ. ಉಪಹಾರಕ್ಕಂತೂ ಇಂಗ್ಲೀಷ್ ಮತ್ತು ಭಾರತೀಯ ಶೈಲಿಯಲ್ಲಿ ಮಸಾಲೆ, ಒಗ್ಗರಣೆಗಳಿಲ್ಲದೆ ಬೇಯಿಸಿದ ರಾಜಮಾ, ಕಾಬುಲ್ ಚನಾ, ಬಟಾಣಿ, ಇತ್ಯಾದಿಯಾಗಿ ಯಾವುದೋ ಒಂದು ಕಾಳು, ಓಟ್ಸ್, ಸ್ಯಾಂಡ್‌ವಿಚ್, ಬೇಯಿಸಿದ ಮೊಟ್ಟೆ ಮತ್ತು ಉಪ್ಪಿಟ್ಟು, ಪೊಂಗಲ್ ಚಿತ್ರಾನ್ನ, ಹುಳಿ ಅನ್ನ – ಹೀಗೇ ಮೂರು ನಾಲ್ಕು ಬಗೆಯಿರುತ್ತಿದ್ದವು. ಕೊಡುವ ಹಣಕ್ಕೆ, ಅಂತಹ ಬರದ ಸ್ಥಿತಿಯಲ್ಲಿ ಅವರು ನೀಡುವ ಆಹಾರ ಪದಾರ್ಥಗಳು ಹೆಚ್ಚೇ ಆಗಿದ್ದವು ಎನ್ನಬೇಕು. ಏನೋ ಬೇಕಾ ಬಿಟ್ಟಿ ಮಾಡಿದಂತಿರದೇ ನಾಲಗೆಗೆ ರುಚಿಯಾಗಿರುತ್ತಿತ್ತು. ಅದರಲ್ಲೂ ಅಲ್ಲಿನ ಊಟ ತಿಂಡಿ ಬಿಟ್ಟರೆ ಇನ್ನೇನೂ ಸಿಗಲಾರದೆಂಬ ಪ್ರಜ್ಞೆ ಜಾಗೃತವಾಗಿದ್ದು, ಇದ್ದುದಕ್ಕಿಂತ ಸ್ವಲ್ಪ ಹೆಚ್ಚಿಗೇ ರುಚಿ ಬರುತ್ತಿತ್ತು.

ನಮಗೆ ಕ್ಯಾಂಟೀನ್‌ನ ಪ್ರತಿಯೊಂದು ಭಾಗವನ್ನು ತೋರಿಸಿದರು. ಸ್ಟೋರ್ ರೂಮ್, ಅಡುಗೆ ಮನೆ, ಅಡುಗೆ ಮಾಡುವ ಕೋಣೆಗಳು ಮತ್ತು ಕಡೆಯದಾಗಿ ನಾಗರಾಜ್ ಅವರ ಕೋಣೆ – ಎಲ್ಲವೂ ಅಚ್ಚು ಕಟ್ಟು, ಅತ್ಯಂತ ಆಧುನಿಕವಾಗಿ ಸಜ್ಜುಗೊಂಡಿದ್ದವು.

ನಮಗೆ ಖುಷಿಯೋ ಖುಷಿ. ಅದು ಕೇವಲ ಮೊದಲ ದಿವಸ ಮಾತ್ರವಾಗಿದ್ದುದರಿಂದ!

ನಮ್ಮ ಸಂಭ್ರಮದ ಓಡಾಟ. ನಮ್ಮ ಇಂಗ್ಲೀಷ್ ಸ್ಟೈಲುಗಳು. ನಮಗೆ ಹಡಗಿನಲ್ಲಿ ದೊರಕುತ್ತಿದ್ದ ಆದರ, ಹಡಗಿನ ಸಿಬ್ಬಂದಿಯವರಿಂದಲೂ ಆಗಲೇ ನಮ್ಮ ಕಡೆ ಗಮನ ಹರಿದು, ನಮ್ಮ ಬಳಿಗೆ ಬಂದು ಇಂಗ್ಲೀಷಿನಲ್ಲಿ ಮಾತನಾಡಿಸುತ್ತಿದ್ದುದು – ಇವೆಲ್ಲವೂ ಉಳಿದ ಪ್ರಯಾಣಿಕರಲ್ಲಿ ಆಗಲೇ ಸ್ವಲ್ಪ ಅಸೂಯೆಗೆ ದಾರಿ ಮಾಡಿತ್ತು.

ಅದು ಸ್ಪಷ್ಟವಾಗಿ ವ್ಯಕ್ತವಾದದ್ದು, ಬಂಕ್ ತರಗತಿಯವರಿಗಿಂತ ಬೇರೆಯಾಗಿ ಕ್ಯಾಬಿನ್ ಊಟದ ಸವಲತ್ತು ನಮಗೆ ನೀಡಿದಾಗ! ಬಂಕ್ ತರಗತಿಯ ಪ್ರಯಾಣಿಕರು ಕೆಲವರು ತಮಗೂ ಕ್ಯಾಬಿನ್ ಊಟ ನೀಡಬೇಕೆಂದು ಹುಯಿಲೆಬ್ಬಿಸಿದರು. ಆದರೆ ಸದ್ಯಕ್ಕೆ ಹೇಗೋ ಸೋಷಿಯಲ್ ವೆಲ್ ಫೇರ್ ಆಫೀಸರರ ಮಧ್ಯ ಪ್ರವೇಶದಿಂದಾಗಿ ಪರಿಸ್ಥಿತಿ ಶಾಂತವಾಯಿತು.

ನೆಲವಾಳಿಗೆ, ನೆಲ, ಮೊದಲ ಮಹಡಿ, ಎರಡನೇ ಮಹಡಿ, ಮೂರನೇ ಮಹಡಿ ಹೀಗೆ ಹಡಗಿನಲ್ಲಿ ವ್ಯವಸ್ಥೆಯಿತ್ತು. ನೆಲ ಮಾಳಿಗೆಯಲ್ಲಿ ಕ್ಯಾಬಿನ್‌ಗಳು – ಮೇಲ್ತರಗತಿ ಪ್ರಯಾಣಿಕರಿಗೆ ಮತ್ತು ಹಡಗಿನ ಅಧಿಕಾರ ವರ್ಗ ಮತ್ತು ಸಿಬ್ಬಂದಿಯವರಿಗೆ, ಹಾಗೆ ನೋಡಿದರೆ ಕ್ಯಾಬಿನ್‌ಗಳಿಗಿಂತ 'ಬಂಕ್' ತರಗತಿಗಳೇ ಮೇಲಾಗಿದ್ದವು. ಧಾರಾಳವಾಗಿ ಗಾಳಿ ಬೆಳಕು ಸಾಧ್ಯವಿತ್ತು. ಕ್ಯಾಬಿನ್‌ಗಳಲ್ಲಿ ಮಲಗುವುದಕ್ಕೆ ಅಚ್ಚು ಕಟ್ಟು ವ್ಯವಸ್ಥೆ ಇದ್ದರೂ ಹಾಸಿಗೆಗಳ ಮತ್ತು ಬರ್ತ್‌ಗಳ ಸುತ್ತಲೂ ತಿಗಣೆಗಳ ಆವಾಸ. ಹಡಗಿನ ಗೋಡೆಗೆ ಒಂದು ಕಿಟಕಿ. ರಾತ್ರಿ ಹೊತ್ತು ಮಲಗಿದರೆ ಭಯಂಕರವೆನಿಸುತ್ತಿತ್ತು. ಸಮುದ್ರದ ಅಲೆಗಳು ಬೆಟ್ಟದಷ್ಟು ಎತ್ತರಕ್ಕೆ ಎದ್ದು ಹಡಗಿನ ಕಿಟಕಿಯವರೆಗೆ ಅಪ್ಪಳಿಸಿ ಬಂದಾಗ ಮೈ ಕಂಪಿಸಿ ಹೋಗುತ್ತಿತ್ತು.

ನಾವು ಕ್ಯಾಬಿನ್ ಟಿಕೇಟುಗಳನ್ನು ಕೊಳ್ಳದಿದ್ದರೂ ಅಧಿಕಾರ ವರ್ಚಸ್ಸಿನಿಂದ, ನಮ್ಮೊಂದಿಗೆ ಬೆಳೆಸಿಕೊಂಡ ಸ್ನೇಹ ಸಲುಗೆಗಳಿಂದ, ಕ್ಯಾಬಿನ್‌ಗಳ ಸವಲತ್ತು ನಮಗೆ ದೊರೆಯಿತು. ಯೂಸೂಫ್, ಶ್ರೀಕಾಂತ್, ಮೊಗಾಂತೊ, ಲೂಯಿಸೆಬಾಸ್ಮಿಯರ್ನ, ಗಜೇಂದ್ರ, ಡಾ॥ ಹರೀಶ್ ಮೊದಲಾದವರೆಲ್ಲ ನಮ್ಮ ಮೊದಲ ದಿನದಂದೇ ನಮಗೆ ಹತ್ತಿರದವರಾದರು.

ಕಾಲೇಜಿನ ಹುಡುಗ ಹುಡುಗಿಯರು, ನೋಡಲು ಚಂದ, ಸ್ವಲ್ಪ ಸುಶಿಕ್ಷಿತ, ಸುಸಂಸ್ಕೃತರಂತೆ, ಶಿಸ್ತಿನವರಂತೆ ಮತ್ತು ಜಾಲಿಯಾಗಿ ಆಡಿ ಆಡುವ ನಮ್ಮಂತಹ ಪ್ರಯಾಣಿಕರು ಅಪರೂಪ. ಒಂದೇ ಬಗೆಯ ಮತ್ತು ತೀರ ಸಾಮಾನ್ಯರಂತೆ ಕಾಣುವ ಪ್ರಯಾಣಿಕರನ್ನು ಕಂಡು ಬೇಸರವಾಗಿದ್ದ ಅವರಿಗೆ ನಮ್ಮ ಬಳಗದ ಸ್ನೇಹ, ತಾಜಾ ಗಾಳಿ ಸೇವನೆಯಂತೆ ಅನಿಸಿರಬೇಕು. ಅವರ ಆತ್ಮೀಯತೆ, ಆಪ್ತತೆಗಳು ಎಷ್ಟರ ಮಟ್ಟಿಗಿದ್ದುವೆಂದರೆ, ನಮ್ಮ ಹುಡುಗರು ಅವರನ್ನು ಅಧಿಕಾರದಿಂದ ಕೇಳುವಷ್ಟು ಸಲುಗೆ ಪಡೆದರು.

ಟಾಯ್ಲೆಟ್‌ನಿಂದ ಹಿಡಿದು ಸ್ನಾನ, ಊಟ, ತಿಂಡಿ, ಸಿನಿಮಾ, ಆಟ ಪಾಠ – ಎಲ್ಲಕ್ಕೂ ಅವರೊಂದಿಗೆ ಮುಕ್ತ ಪರವಾನಗಿ, ನಿಷಿದ್ಧ ಕೋಣೆಗಳಿಗೆಲ್ಲಾ ನಮ್ಮವರ ಧಾಳಿ. ಹಡಗಿನ ಪರಿವಾರದವರೆಲ್ಲ ನಮ್ಮ ವಿದ್ಯಾರ್ಥಿಗಳಿಗೆ 'ಅಂಕಲ್' ಗಳಾಗಿ ಬಿಟ್ಟಿದ್ದರು.

ಬೆಳಗಿನ ಸುಪ್ರಭಾತದಿಂದ ಹಿಡಿದು ರಾತ್ರಿ ಗುಡ್‌ನೈಟ್‌ವರೆಗೆ ಯಾರಾದರೂ ಒಬ್ಬರು ಬಂದು ನಮ್ಮನ್ನು ವಿಚಾರಿಸಿಕೊಂಡು, ನಮ್ಮ ತೊಂದರೆ ತಾಪತ್ರಯಗಳನ್ನು ಕೇಳಿ ನಿವಾರಿಸಿಕೊಡುತ್ತಿದ್ದರು. ಕೇವಲ ಮೂರು ದಿನಗಳಲ್ಲಿ ಮೂವತ್ತು ವರುಷಗಳ ಸ್ನೇಹದಷ್ಟು ಹತ್ತಿರವಾದೆವು.

ಹಡಗಿನ ಪ್ರಯಾಣವೆಂದರೆ ಇಷ್ಟು ಸವಿಯಾಗಿರುತ್ತದೆಯೇ ಎಂದು ಆಶ್ಚರ್ಯವಾಗುತ್ತಿತ್ತು!

ಇದಿಷ್ಟೂ ಒಳಗಿನ ಸಂಗತಿಯಾದರೆ, ಹಡಗಿನಲ್ಲಿನ ಡೆಕ್‌ಗೆ ಬಂದು ನೋಡಿದರೆ, ಎಂತಹ ಅಭೂತ ಪೂರ್ವ ಅನುಭವ! ಮಾತಿಗೆ ಮೀರಿದ ವಿಸ್ತಾರವಾದ ಕಡಲು, ಸಮುದ್ರ ಗಾಂಭೀರ್ಯವೆಂದರೇನೆಂದು ಈಗ ನನ್ನ ಮನಕ್ಕೆ ಬಂತು. ಪ್ರಶಾಂತ ಪರಿಸರ. ಡೆಕ್ಕಿನಲ್ಲಿ ಸುತ್ತಲೂ ಕಟ್ಟಿರುವ ಅಡ್ಡ ಕಂಬಿಗಳ ಮೇಲಿಂದ ಬಾಗಿ ಕೆಳಕ್ಕೆ ನೋಡಿದರೆ ನಿಧಾನವಾಗಿ ಕಡಲ ಮೈಯನ್ನು ಸೀಳಿಕೊಂಡು ಹೋಗುವಾಗ ಏಳುವ ನೊರೆ, ಹಡಗಿನ ನಡುವಿಗೆ ಕಟ್ಟಿದ ಬಿಳಿಯ ಉಡಿದಾರದಂತೆ ಕಾಣುತ್ತಿತ್ತು. ದಡ ಬಿಟ್ಟಾಗ ಹಸಿರಾಗಿದ್ದ ಜಲರಾಶಿ, ಮುಂದೆ ಮುಂದೆ ಸಾಗಿದಂತೆ ದಟ್ಟ ನೀಲಿಯಾಯಿತು. ಇನ್ನೂ ಮುಂದೆ ಸಾಗಿದಂತೆ, ಬಾನ್ನೀಲಿ, ಕಡಲ ನೀಲಿಗಳು ಬೆರೆತು ಗಾಢವಾದ ಮಸಿ ಬಣ್ಣಕ್ಕೆ, ಅಂದರೆ ದಟ್ಟ ಕಪ್ಪು ಬಣ್ಣಕ್ಕೆ ತಿರುಗಿತ್ತು. ಬಂಗಾಳ ಕೊಲ್ಲಿಯ ನೀರು ಕಪ್ಪು ನೀರು – ಬಹುಶಃ ಅದಕ್ಕೆ ಏನೋ ಬ್ರಿಟಿಷರು, ನಮ್ಮ ಸ್ವಾತಂತ್ರ್ಯ ಯೋಧರನ್ನು, ಬೇರೆ ಬಗೆಯ ಅಪರಾಧಿಗಳನ್ನು ದೇಶ ದ್ರೋಹಿಗಳೆಂದು ಬಗೆದು, ಕಪ್ಪು ನೀರಿನ ಶಿಕ್ಷೆಗೆಂದು ಇಲ್ಲಿಗೆ ಕಳಿಸುತ್ತಿದ್ದುದು! 'ಕಾಲಾಪಾನಿ' ಶಿಕ್ಷೆ ಎಂದರೆ ಇದೇ ಇರಬೇಕು! – ಅನಿಸಿತು.

ಹೇಳುವುದು ಮರೆತಿದ್ದೆ. ನಾವು ಹೊರಟ ಹಡಗಿನಲ್ಲೇ ನನ್ನ ಇನ್ನೊಬ್ಬ ಗೆಳತಿ ಸಂತಾನ ಪ್ರಾಪ್ತಿಯ ನಂತರದ ಮಧುಚಂದ್ರಕ್ಕೆ ಅಂಡಮಾನವನ್ನು ಆರಿಸಿಕೊಂಡು ಬಂದಿದ್ದಳು ! ಅವಳೂ ಸಾಹಿತ್ಯದ ಉಪನ್ಯಾಸಕಿ. ಅವಳನ್ನು ಹಡಗಿನಲ್ಲಿ ಕಂಡಾಗ ಸಂಭ್ರಮಾಶ್ಚರ್ಯ ! ಯಾಕೆಂದರೆ ನನ್ನ ಜೊತೆಗೆ ಕಡಲು, ಮುಗಿಲು, ಸೂರ್ಯ ಚಂದ್ರ ಸೌಂದರ್ಯಾನುಭೂತಿಗೆ ಸಿಕ್ಕಿದಳಲ್ಲ! ಲೀಲಾ – ಎಷ್ಟಾದರೂ ಪ್ರಾಣಿಶಾಸ್ತ್ರದ ಮೇಡಂ. ಅವಳ ದೃಷ್ಟಿ ಎಲ್ಲವೂ ಯಾವ ಥರದ ಮೀನು ಮೊಸಳೆಗಳು ದೊರೆತಾವು! ಎಂಬುದರಲ್ಲಿಯೇ! ಸಮುದ್ರದ ಹಕ್ಕಿಗಳು, ಡಾಲ್ಫಿನ್ ಮೊದಲಾದವುಗಳ ಕಡೆ ಅವಳ, ವಿದ್ಯಾರ್ಥಿಗಳ ಕಣ್ಣು!! ನೀರಿನ ಮಟ್ಟದಿಂದ ಹಡಗು ಎಷ್ಟೋ ಎತ್ತರದಲ್ಲಿದ್ದರೂ, ಸ್ವಲ್ಪ ಕೈ ಚಾಚಿದರೆ ನೀರಿನ ಪದರವನ್ನು ಮುಟ್ಟಬಹುದು ; ಅಲೆಗಳನ್ನು ಹಿಡಿಯಬಹುದು, ನೊರೆಯನ್ನು ಕದಡಬಹುದು – ಎಂಬ ಭಾವನೆ ಉಂಟಾಗುತ್ತಿತ್ತು.

ನಮ್ಮ ನಮ್ಮ ಸೀಟುಗಳಲ್ಲಿ ಕೂರುವುದೇ ಹಿಂಸೆಯಾಗಿತ್ತು. ಲಗೇಜು ಕಾಯಬೇಕಾಗಿದ್ದುದರಿಂದ ಒಂದಿಬ್ಬಿಬ್ಬರು ಉಳಿದು ಮತ್ತೆ ಎಲ್ಲರೂ ಡೆಕ್ಕಿನ ಮೇಲೇ!

ನೀರು....... ನೀರು..... ನೀರು ಎಲ್ಲೆಲ್ಲೂ ನೀರು. ಆದರೆ ಬೇಕೆನಿಸಿದಾಗ ಕುಡಿಯಲು ನೀರು ಕೂಡಾ ಇಲ್ಲ. ನೀರಿಗೆ ತುಟ್ಟಿ, ಊಟ ತಿಂಡಿ ಕಾಫಿ ವೇಳೆ ಬಿಟ್ಟರೆ ಕ್ಯಾಂಟೀನ್

ಬಂದ್, ಹಾಗಾಗಿ ನಮ್ಮ ಬಾಯಾರಿಕೆ ಕಾಫಿ, ಟೀ ಚಟಗಳನ್ನು ಒತ್ತಟ್ಟಿಗೆ ಕಟ್ಟಿಡಬೇಕಿತ್ತು.

ಸಂಜೆಗೆ ಹಿತವಾದ ಉಪ್ಪು ಕಡಲಿನ ಗಾಳಿ, ಮಾಗಿದ ಸಂಜೆ ರಾತ್ರಿಯಾದಾಗ ಆಕಾಶದ ಚಪ್ಪರದ ತುಂಬಾ ನಕ್ಷತ್ರ ಗೊಂಚಲು. ನಡುವೆ ತೂಗುವ ಬೆಳ್ಳಿ ಚಂದ್ರನ ಸೊಗಸು ಬಿಟ್ಟರೆ ಸುತ್ತಲ ಜಗತ್ತೆಲ್ಲವೂ ಕತ್ತಲ ಮಯ. ಬರೀ ಕತ್ತಲು. ಏನೇನೂ ಕಾಣದು ಅಗೋಚರ ಶಕ್ತಿಯ ಮೂಲಕ ತಾವು ಸಾಗುತ್ತಿದ್ದೇವೆಂಬ ಅನುಭವ ಬಿಟ್ಟರೆ ಬೇರೇನೂ ತಿಳಿಯುತ್ತಿಲ್ಲ. ಕೆಳಗೆ ಕಡಲ ನೀರೂ ಕಾಣುವುದಿಲ್ಲ. ಒಮ್ಮೊಮ್ಮೆ ಯಾವುದೋ ಕೀಟದ್ದೋ, ಹಕ್ಕಿಯದೋ ಮೇಲೆ ಜಿಗಿವ ಮೀನುಗಣ್ಣಿಗಳ ಬೆಳಕೋ –ಒಮ್ಮೇ ಮಿಂಚಿ ಮರೆಯಾಗುತ್ತಿದ್ದಂತೆ ಅನಿಸಿತು.

ಜಗತ್ತೆಲ್ಲವೂ ದೂರ – ದೂರ – ನಾವು ಮಾತ್ರ ತೇಲುತ್ತಿದ್ದೇವೆ .. ಅಕಸ್ಮಾತ್ ನಾವೆಲ್ಲ ಹೀಗೆ ಅಸಹಾಯಕರಾಗಿ, ಏನಾದರೂ ಹೆಚ್ಚು ಕಮ್ಮಿಯಾಗಿ ಸತ್ತರೆ !.... ಹಡಗಿನಲ್ಲಿ ಏನಾದರೂ ಅನಾಹುತ ಸಂಭವಿಸಿದರೆ! .. ಇದ್ದಕ್ಕಿದಂತೆ ಭಯಂಕರ ಬಿರುಗಾಳಿಯೆದ್ದು, ನಮ್ಮ ಹಡಗು ಅಘಾತಕ್ಕೆ ಒಳಗಾದರೆ!....ಟ್ಯಾಗೋರರ 'ನೌಕಾಘಾತ' ಕಾದಂಬರಿ ನೆನಪಾಯಿತು.... ಸಣ್ಣಗೆ ಒಳಗೊಳಗೇ ನಡುಗಿದೆ. ... ಮನುಷ್ಯ ಈ ಮಹಾ ನಿಸರ್ಗದ ಮಡಿಲಲ್ಲಿ ಎಷ್ಟರವನು!.. ಎಂದು ಒಳಗೊಳಗೇ ಮೊರೆಯಿಟ್ಟುಕೊಂಡು ನನ್ನ ಭೀತ ಮನಸ್ಸಿಗೆ ಸಾಂತ್ವನ ಹೇಳುತ್ತಿದ್ದೆ.... ಹೊರಗೆ ಮಾತ್ರ ಗೆಲುವಿನ ಸೋಗನ್ನು ಧರಸಿದ್ದೆ. ಲೂಯಿ(ಸ್) ಶ್ರೀ ಕಾಂತ್ ಸಿಕ್ಕಿದಾಗ ನನ್ನ ಸಂದೇಹಗಳಿಗೆ ಸಮಾಧಾನ ಕೇಳುತ್ತಿದ್ದೆ. ಆಕಸ್ಮಿಕ ಪರಿಸ್ಥಿತಿಗಳಲ್ಲಿ – ತುರ್ತು ಸಂದರ್ಭಗಳಲ್ಲಿ ಪ್ರಯಾಣಿಕರ ರಕ್ಷಣೆ ಹೇಗೆ – ಎಂದು ಕುತೂಹಲದಿಂದ, ಏನೋ ತಿಳಿದುಕೊಳ್ಳುವವಳಂತೆ ಕೇಳುತ್ತಿದ್ದೆ. ಅಪಘಾತಗಳು ಸಂಭವಿಸಿದ ಪಕ್ಷದಲ್ಲಿ ಪ್ರಯಾಣಿಕರನ್ನು ರಕ್ಷಿಸಲು ಬೇಕಾದ ಮುಂಜಾಗ್ರತೆಯ ವ್ಯವಸ್ಥೆಗಳಿದ್ದವು. ಸುದ್ದಿ ತಲುಪಿಸುವುದಕ್ಕೆ ವಿಶಿಷ್ಟವಾದ ಅತ್ಯಂತ ಆಧುನಿಕವಾದ ಎಲೆಕ್ಟ್ರಾನಿಕ್ ಸಂಪರ್ಕ ವ್ಯವಸ್ಥೆಯಿತ್ತು. ಜೊತೆಗೆ ಹಡಗಿನ ನಾಲ್ಕೂ ಮೂಲೆಗಳಲ್ಲಿ ರಕ್ಷಣಾ ದೋಣಿಗಳು ಮತ್ತು ರಕ್ಷಣಾ ಕ್ಯಾಪ್ಸೂಲುಗಳು (ಕೋಶಗಳು) ಇದ್ದವು. ತುರ್ತು ಪರಿಸ್ಥಿತಿಯಲ್ಲಿ ಇವುಗಳನ್ನು ಇಳಿಸುವ ವ್ಯವಸ್ಥೆಯಿತ್ತು. ರಕ್ಷಣಾ ಕ್ಯಾಪ್ಸೂಲುಗಳಲ್ಲಿ ಬಲೂನಿನಾಕಾರದ ತೇಲುಕೊಡೆಗಳಿರುತ್ತವೆ. ರಕ್ಷಣೆ ಪಡೆಯುವ ವ್ಯವಸ್ಥೆ ಇರುತ್ತದೆ. ಅದರಲ್ಲಿ ನೀರು, ಒಂದಷ್ಟು ಬಿಸ್ಕತ್ತುಗಳು ವಗೈರೆ ತೆಳು ಆಹಾರಕ್ಕೆ ಸಾಕಗುವಷ್ಟು ಸಾಮಾಗ್ರಿಯನ್ನೂ ಇಟ್ಟಿರುತ್ತಾರೆ. ಹಾಗೂ ಹೀಗೂ ಜೀವವುಳಿಸಕೊಂಡು ತೇಲುತ್ತಿರುವಾಗ ಬೇರೆ ರಕ್ಷಣೆಯ ವ್ಯವಸ್ಥೆಯನ್ನು ಮಾಡುತ್ತಾರೆ – ಇದಿಷ್ಟೂ ಅವರು ನನಗೆ ಹೇಳಿದ ವಿವರಗಳು.

ಈ ಎಲ್ಲಾ ಸ್ನೇಹ – ಸೌಲಭ್ಯಗಳು ಮೊತ್ತ ಮೊದಲ ಹಡಗು ಪ್ರಯಾಣದ ಒಂದು ಉತ್ಸಾಹ, ಜೀವನೋತ್ಸಾಹಗಳಿಂದ ತುಂಬಿ ತುಳುಕುವ ನಮ್ಮ ವಿದ್ಯಾರ್ಥಿಗಳ ಸಹವಾಸದಲ್ಲಿ ಪ್ರಯಾಣದ ಪ್ರಯಾಸವೇ ತಿಳಿಯುತ್ತಿರಲಿಲ್ಲ. ಎಲ್ಲವೂ ಸರಿಯಾಗಿತ್ತು; ಚೆನ್ನಾಗಿತ್ತು. ಆದರೆ ಕೆಲವು ಹುಡುಗರಿಗೆ ಸಮುದ್ರ ಖಾಯಿಲೆ (Sea Sickness) ಅಂಟಿ ಬಿಟ್ಟಿತು. ನೀರಿನಲೆಗಳ ಮೇಲೆ ಜೋಕಾಲಿಯಂತೆ ಹಡಗು ತೂಗಿದಾಗ, ಹೊಟ್ಟೆಯಲ್ಲಿ ಒಂದು ಬಗೆಯ ತೊಳಸು,

ನೇರವಾಗಿ ನಡೆಯಲೂ ಆಗುವುದಿಲ್ಲ. ಸಮತೂಕ ತಪ್ಪಿ ತೂರಾಡಿದಂತಾಗುತ್ತದೆ. ತಲೆ ಸುತ್ತು ವಾಂತಿಗಳ ವರದಿ ಪ್ರಾರಂಭವಾಯಿತು. ಮಂಜುಳ ಒಬ್ಬಳಿಂದ ಪ್ರಾರಂಭವಾದ್ದು, ಲಕ್ಷ್ಮೀ, ಮಾಲಿನಿ, ಅನಸೂಯ, ಹರೀಶ್ – ಹೀಗೆ ಒಬ್ಬರಾದ ಮೇಲೆ ಒಬ್ಬರು 'ಸಿಕ್ ಲಿಸ್ಟ್' ಸೇರುತ್ತಾ ಬಂದರು. ವೇಗ ಹೆಚ್ಚಿದಂತೆ ವಾಂತಿ ಮಾಡುವವರ ಸಂಖ್ಯೆ ಹೆಚ್ಚಿತು. ಒಂದು, ಎರಡು, ಮೂರು – ಹೀಗೆ ದಿನಕ್ಕೆ ಎಂಟು ಹತ್ತು ಸಲ ವಾಂತಿ! ಬೇರೆಯವರಿಗೆ ತಮಾಷೆ. ಒಬ್ಬೊಬ್ಬರೂ ಎಷ್ಟು ಸಲ ವಾಂತಿ ಮಾಡಿದ್ದಾರೆ – ಎಂದು ಲೆಕ್ಕ ಆರಂಭಿಸಿ ಒಂದು 'ವಾಂತಿ ಕಮಿಟಿ' ಅಂತ ಮಾಡಿ, ಹೆಚ್ಚು ಸಲ ವಾಂತಿ ಮಾಡಿ ಹ್ಯಾಟ್ರಿಕ್ ಸ್ಥಾಪಿಸಿದವರನ್ನು (ಉಷಾ) – 10 ಸಲ) ಕಮಿಟಿ ಅಧ್ಯಕ್ಷರಾಗಿ ಘೋಷಿಸಿದರು.

ಆದರೆ ಇಂತಹ ಪರಿಸ್ಥಿತಿಯಲ್ಲೂ ಹುಡುಗರು ಉತ್ಸಾಹ ಕಳೆದುಕೊಳ್ಳಲಿಲ್ಲ.

ಹಡಗು ನಮ್ಮ ಕನಸಿನ ಸ್ವರ್ಗ ದ್ವೀಪವನ್ನು ಸೇರುವುದನ್ನೇ ಎದುರು ನೋಡುತ್ತಿದ್ದರು.

15.11.90 ರಂದು ಬೆಳಗಿನ ಜಾವ 4.30 ಗಂಟೆಗೆ ಧ್ವನಿ ವರ್ಧಕದಲ್ಲಿ ಬೀಜಿಂಗ್ – ಬೀಜಿಂಗ್ – ಎಂದು ಫಿಲಿಪಿನೋ ಭಾಷೆಯಲ್ಲಿ ಘೋಷಿಸಿ, ಇನ್ನು ಒಂದೆರಡು ಗಂಟೆಗಳಲ್ಲಿ ಪೋರ್ಟ್ ಬ್ಲೇರ್ ತಲುಪಲಿದ್ದೇವೆಂದು ತಿಳಿಸಿದರು.

ಹೋ – ಎಂದು ನಮ್ಮ ಹುಡುಗರು ನಿದ್ದೆ ಗಣ್ಣುಗಳಲ್ಲೆ ಗದ್ದಲ ಆರಂಭಿಸಿದರು. ಸರಸರನೆ ಮುತ್ತಿದ್ದ ನಿದ್ದೆ ಮತ್ತನ್ನು ಒತ್ತರಿಸಿ, ಹೊದ್ದ ದುಪ್ಪಟಿಗಳನ್ನು ಕಿತ್ತೆಸೆದು ಹಡಗಿನ ಕಿಟಕಿಗಳಿಗೆ ಮುಖ ಹಚ್ಚಿದರು ; ಮತ್ತೆ ಕೆಲವರು ಡೆಕ್ ಮೇಲಕ್ಕೆ ಓಡಿದರು. ದೂರದಿಂದಲೇ ಸ್ವರ್ಗ ದರ್ಶನದ ಮೊದಲ 'ಝಲಕು' ಪಡೆಯಲು!

## ಸ್ವರ್ಗ ದ್ವೀಪದೊಳಕ್ಕೆ : –

6 ಗಂಟೆಗೆ ಪೋರ್ಟ್ ಬ್ಲೇರ್ ತಲುಪಿದೆವಾದರೂ ಇನ್ನೂ ದಡ ಮುಟ್ಟಲು ಕೆಲವು ಕಿಲೋ ಮೀಟರುಗಳ ದೂರವಿತ್ತು. ಪೋರ್ಟ್‌ಬ್ಲೇರ್ ಕ್ಯಾಪ್ಟನ್ ಬರುವವರೆಗೂ ನಮ್ಮ ಹಡಗು ಮುಂದೆ ಚಲಿಸುವುದಿಲ್ಲ. ಆತ ಬಂದು ಹಡಗು ನಿಲ್ಲ ಬೇಕಾದ ನಿಶ್ಚಿತ ಸ್ಥಳವನ್ನು ಸೂಚಿಸುವವರೆಗೆ, ಹಾಗೆಯೇ ಮೆಲ್ಲನೆ ಮಂದಗಮನದಿಂದ ಸಾಗುತ್ತಿತ್ತು. ಅಷ್ಟರಲ್ಲಿ ಮತ್ತೊಂದು ಬಲಶಾಲಿಯಲ್ಲಿ ಪರಿಣತ ಸಿಬ್ಬಂದಿ ನಮ್ಮ ಹಡಗಿನ ಬಳಿಗೆ ಬಂತು. ಅದರೊಳಗಿಂದ ಕ್ಯಾಪ್ಟನ್ ನಮ್ಮ ಹಡಗಿನಿಂದ ಇಳಿಬಿಟ್ಟ ಹಗ್ಗ ಏರಿ ಒಳಕ್ಕೆ ಬಂದ. ಹಿಂದಿನಿಂದ 'ಬಲಶಾಲಿ' ನಮ್ಮ ಹಡಗನ್ನು 'ಗುಮ್ಮಿ' (ನೂಕಿ) ಮೆಲ್ಲ ಮೆಲ್ಲಗೆ 'ಚಾತಮ್' ಬಂದರಿನತ್ತ ಒತ್ತರಿಸಿತು.

ಹಡಗು ತಲುಪಿದರೂ, ಅದನ್ನು ಗೂಟಕ್ಕೆ ಬಿಗಿದು, ಭೂತಾಕಾರದ ಬಾಗಿಲನ್ನು ತೆಗೆದು, ದಂಡೆಯವರೆಗೆ ಅದನ್ನು ಹಾಸುವವರೆಗೆ ನಾವು ಇಳಿಯುವಂತಿರಲಿಲ್ಲ. ಹಾಗಾಗಿ, ಕಾದು ಕಾದು, ಕೊನೆಗೆ ಅಂಡಮಾನದ ದಂಡೆಯಲ್ಲಿ ಕಾಲಿಟ್ಟಾಗ ಬೆಳಿಗ್ಗೆ 7.30 ಆಗಿತ್ತು.

ಸಂಕುಚಿತ ಸೆರೆಯಿಂದ ಮುಕ್ತ ಬಯಲಿಗೆ ವೈಯೊಡ್ಡಿದಂತಾಯಿತು. ನಮ್ಮ

ಭಾವೋದ್ವಿಗ್ನತೆಗೆ ಎಣೆಯಿಲ್ಲ. ಕ್ಷಿತಿಜದಾಚೆಗಿನ ಯಾವುದೋ ಉನ್ಮತ್ತ ಲೋಕದಲ್ಲಿ ತೇಲುತ್ತಿರುವಂತೆನಿಸಿತು. ಕಣ್ಣಿಗೆ ತಂಪು ಕರೆವ ಹಸಿರು .. ಎಲ್ಲಿ ನೋಡಿದರೆಲ್ಲಿ ಹಸಿರ ಶ್ರೇಣಿಗಳು. ಒಂದು ಕ್ಷಣ ಮೈಮರೆತು ನನ್ನ ಸುತ್ತಲಿನ ನಿಸರ್ಗವನ್ನು ವೀಕ್ಷಿಸಿದೆ. ಓಹ್ ಇದರ ಒಡನಾಟದಲ್ಲಿರಲು ಬಂದಿರುವ ನೆನಪಾಗಿ ನನ್ನೆದೆಯ ಭಾವಗಳು ಉಕ್ಕುಕ್ಕಿ ಉರುಳಿದವು.

ಮತ್ತೊಮ್ಮೆ ನನ್ನ ದೃಷ್ಟಿ ಹಾಯಿಸಿ ಸುತ್ತಲೂ ನೋಡಿದೆ. ಓಹ್ ! ಸ್ವರ್ಗವೆಂದರೆ ಇದೇ ಇರಬಹುದೇ ! ನಿಶ್ಯಬ್ದ ಮೌನದ ನಡು ನಡುವೆ ಲಯ ಬದ್ಧವಾಗಿ ಕೇಳಿ ಬರುತ್ತಿದ್ದ ಅಲೆಗಳ ನಿರ್ಘೋಷ ! ಶಿಸ್ತಿನ ಸಿಪಾಹಿಗಳಂತೆ ಕಾವಯಿತಿಗೆಂದು ನಿಂತ ಎತ್ತರದ ತೆಂಗು, ಕೌಂಗು, ಈಚಲ ಮರಗಳು! ಕಡಲು ಮುಗಿಲುಗಳ ಅಲೌಕಿಕ ಆಲಿಂಗನದಂತೆ ಕಾಣುವ ಕ್ಷಿತಿಜ! – ಇವಳು ದ್ವೀಪ ಸುಂದರಿಯೇ ಸರಿ. ಭಾವ ಸಮಾಧಿಗೆ ಇಳಿಯುತ್ತಿದ್ದಂತೆ, ಅಂಡಮಾನದ ಅಪ್ಸರೆ, ಮೈ ಕಳೆದು ನಿಂತಳು. ಅವಳ ರೂಪವಿಲಾಶ, ವೈಭವಗಳು ಮಾತಿಗೆ ಮೀರಿದ್ದೆನಿಸಿತು. ‘ಅಲೆ ನಿರಿಗಳ ಸೀರೆಯುಟ್ಟು! ಹಸಿರ ಕುಸುರಿ ಮುಸುಕು ಹೊದ್ದು, ಚಿಕ್ಕಿ ಮಲ್ಲೆದಂಡೆ ಮುಡಿದು! ತುಟಿಗೆ ಅರುಣರಾಗ ಬಳಿದು! ಹಣೆಗೆ ಚಂದ್ರ ಬೊಟ್ಟನಿಟ್ಟು, ಮುಗಿಲ ಕುರುಳು ತೀಡಿಕೊಂಡು ! ಕಣ್ಣ ಬೆಳಕು ಚೆಲ್ಲಕೊಂಡು ತೆಂಗು ಚವರಿ ಸೇವೆಯಲ್ಲಿ, ಮರದ ಪಚ್ಚೆನೆರಳಿನಲ್ಲಿ, ಗಿರಿ ಬನಗಳ ಬೀದಿಯಲ್ಲಿ ! ಬೀಗಿ ನಡೆವ ಬೆಡಗಿ ಹುಡುಗಿ’ ಅನ್ನುವುದರಲ್ಲಿ ಸಂಶಯವೇ ಇರಲಿಲ್ಲ.

ಎಂತಹವರನ್ನೂ ಭಾವ ಪರವಶತೆಯ ಮೋಡಿಗೆ ಸೆಳೆದೊಯ್ಯುವ ಈ ದ್ವೀಪ ಸೌಂದರ್ಯ, ಮೊದಲೇ ಭಾವುಕ ಮನಸ್ಸಿನವಳಾದ ನನ್ನನ್ನು ಕನಸಿಗಿಳಿಸಿ ಕರಗಿಸಿ ಬಿಟ್ಟಿತ್ತು. ನನ್ನ ಗೆಳತಿಗೆ ನನ್ನನ್ನು ಆಗಾಗ ಇಂತಹ ಭಾವ ಸಮಾಧಿಯೊಳಗಿಂದ ಎಬ್ಬಿಸಿಕೊಂಡು ಬರುವುದು ಒಂದು ದೊಡ್ಡ ಸಮಸ್ಯೆಯಾಗಿತ್ತು. ಆದರೂ ಅದನ್ನು ಸಹಿಸದೆ ಅವಳಿಗೆ ಬೇರೆ ದಾರಿಯೇ ಇರಲಿಲ್ಲ. ಮಾಮೂಲಿನಂತೆ, ನನ್ನ ಬೆನ್ನ ಮೇಲೆ ಎರಡು ಸಲ ತಟ್ಟಿ ಎಚ್ಚರಿಸಬೇಕಾಯಿತು. ಇಲ್ಲೆ ಕುಳಿತು ಕವಿತೆ ಬರೆಯೋಕೆ ಶುರು ಮಾಡಬೇಡ ತಾಯಿ ! ಎದ್ದು ನಿನ್ನ ಸಾಮಾನುಗಳನ್ನು ಪರೀಕ್ಷಿಸಿ, ಹೊರಡು, ಈಗಾಗಲೇ ಹಡಗಿನ ಬಾಗಿಲಲ್ಲಿ ಪ್ರಯಾಣಿಕರ ಸಾಮಾನುಗಳನ್ನು ತಪಾಸಣೆ ಮಾಡುವ ಕಾರ್ಯ ಆರಂಭವಾಗಿತ್ತು. ನಮ್ಮೆಲ್ಲರ ಸಾಮಾನುಗಳನ್ನು ತಪಾಸಣೆ ಮಾಡುವ ಕಾರ್ಯ ಆರಂಭವಾಗಿತ್ತು. ನಮ್ಮೆಲ್ಲರ ಸಾಮಾನುಗಳನ್ನು ಒಟ್ಟಿಗೆ ಲೆಕ್ಕಾಚಾರ ಹಾಕಿ ಹೊರಗೆ ಹೊರೆಸಿಕೊಂಡು ಬಂದೆವು. ಯಾರೂ ನಮ್ಮನ್ನು ನಿರ್ಬಂಧಿಸಲಿಲ್ಲ.

ನನಗಂತೂ ಹಡಗು, ಹಡಗಿನಿಂದ ನೋಡುತ್ತಿದ್ದ ಅಂಡಮಾನದ ಆ ಕನಸಿನ ಲೋಕ ತೀರಾ ಆಪ್ತವೆನಿಸತೊಡಗಿತ್ತು.

ಮನಸ್ಸಿಲ್ಲದ ಮನಸ್ಸಿನಿಂದ ಭಾರವಾದ ಹೆಜ್ಜೆಗಳನ್ನಿಡುತ್ತಾ ಬಂದರಿನಿಂದ ಹೊರಗೆ ಬಂದೆವು. ಹಡಗಿನಲ್ಲಿದ್ದಷ್ಟು ಹೊತ್ತೂ ಬೇಸಿಗೆಯ ಬಿಸಿಲಿನ ಅನುಭವವಾಗಿತ್ತು. ಸುಡು ಸುಡು ಬಿಸಿಲೇ ಇನ್ನು ನಮ್ಮ ಪ್ರವಾಸದುದ್ದಕ್ಕೂ ನಮ್ಮ ಪಾಲಿಗೆ ಇರುವುದೆಂದು ಭಾವಿಸಿದ್ದೆವು.

ಅಲ್ಲಿನ ಹವಾಗುಣದ ಬಗ್ಗೆ ನಮಗೆ ಅಷ್ಟೇನೂ ಸ್ಪಷ್ಟವಾದ ಕಲ್ಪನೆಯಿರಲಿಲ್ಲ. ಆದರೆ ಅಂಡಮಾನದ ಬಗ್ಗೆ ನಮ್ಮ ಬಳಿ ಸಾಕಷ್ಟು ರೆಫರೆನ್ಸ್ ಮೆಟೀರಿಯಲ್ ಇತ್ತು. ಹುಡುಗರನ್ನು ಅಂಡಮಾನ ಸಂದರ್ಶನಕ್ಕೆ ಕರೆದೊಯ್ಯುವ ಮೊದಲು ಅವರಿಗೆ ಅದರ ಬಗ್ಗೆ ಭೌಗೋಳಿಕ, ಐತಿಹಾಸಿಕ ವಿವರಗಳನ್ನು ನೀಡುವುದು ಅಗತ್ಯವೆಂದು ಭಾವಿಸಿದ್ದರಿಂದ ನಮ್ಮಲ್ಲಿ ವಿಷಯ ಸಂಗ್ರಹಣೆ ಇತ್ತು.

ನಮ್ಮ ಸಾಮಾನು ಸರಂಜಾಮುಗಳನ್ನು ಹೊರೆಸಿಕೊಂಡು ಹಡಗಿಳಿದು ಹೊರಗೆ ಬಂದೆವು. ಪುರುಷೋತ್ತಂ ಅವರು ಅಷ್ಟು ಹೊತ್ತಿಗೆ ವ್ಯಾನಿನ ವ್ಯವಸ್ಥೆ ಮಾಡಿದ್ದರು.

ಅಧ್ಯಯನ ಪ್ರವಾಸಕ್ಕೇಂದು ವಿದ್ಯಾರ್ಥಿಗಳನ್ನು ನಾವು ಕರೆತಂದದ್ದರಿಂದ ಹೊರಗೆ ಬರುವಾಗ ಯಾವ ನಿರ್ಬಂಧವೂ ಇರಲಿಲ್ಲ. ರಾಜ ಠೀವಿಯಿಂದ ಹುಡುಗರು ಮತ್ತು ನಾವು ವ್ಯಾನ್ ಹತ್ತಿ ಅಬೆರ್ ಡೀನ್ ಬಜಾರಿನಲ್ಲಿದ್ದ ವೈ.ಎಂ.ಸಿ.ಎ ಹಾಸ್ಟೆಲನ್ನು ತಲುಪಿದೆವು. ಮೊದಲೇ ಎಲ್ಲ ಬುಕ್ಕಿಂಗ್ ಆದದ್ದರಿಂದ ನಮ್ಮ ನಮ್ಮ ಕೋಣೆಗಳನ್ನು ಆಕ್ರಮಿಸಿದೆವು. ಹುಡುಗಿಯರಿಗೆ ಮತ್ತು ಹುಡುಗರಿಗೆ ಬೇರೆ ಬೇರೆಯಾಗಿ ಡಾರ್ಮಿಟರೀಸ್ ಇದ್ದವು. ಮೂರು ದಿನಗಳ ಕಡಲ ಪ್ರಯಾಣದ ನಂತರ ನೆಲದ ಮೇಲೆ ಹೆಜ್ಜೆ ಇಡುತ್ತಿದ್ದುದೇ ಒಂದು ರೋಚಕ ಅನುಭವವಾಗಿತ್ತು. ವಿದ್ಯಾರ್ಥಿಗಳಿಗೆ ಇನ್ನೂ ಹಡಗಿನಲ್ಲಿನ ತೂಗಾಟದ ಗುಂಗು ತಲೆ ತುಂಬಿದಂತಿತ್ತು. ತೂರಾಡುತ್ತಲೇ ಒಬ್ಬರ ಮೇಲೊಬ್ಬರು ಬಿದ್ದುಕೊಂಡು ನಕ್ಕು ನಲಿಯುತ್ತಿದ್ದರು. ಅವರ ಮಾತು ಸುಳ್ಳಾಗಿರಲಿಲ್ಲ. ನಮಗೂ ಹಾಗೇ ಅನಿಸುತ್ತಿತ್ತಾದರೂ ತೋರ್ಪಡಿಸಿಕೊಳ್ಳಲಿಲ್ಲ. ಆ ದಿನವೆಲ್ಲ ನಮ್ಮದೇ. ಹೆಚ್ಚಿಗೆ ಕಾರ್ಯ ಕ್ರಮಗಳೇನೂ ಇರಲಿಲ್ಲ. ನಮ್ಮ ನಮ್ಮ ಪಾಡಿಗೆ ನಾವು ಹೊರಟು ಹೋಗುವುದಕ್ಕೆ ಮೊದಲು ನನ್ನ ಗೆಳತಿ ಲೀಲ ವಿದ್ಯಾರ್ಥಿಗಳನ್ನು ಒಂದೆಡೆ ಸೇರಿಸಿ ನಾಳೆ ಬೆಳಗಿನ ಕಾರ್ಯಕ್ರಮಗಳನ್ನು ವಿವರಿಸಿ ಹೇಳಿದಳು. ಸ್ನಾನ, ಪಾನ ಅಂತ ಕೂಡುವ ಹಾಗಿರಲಿಲ್ಲ. ಬೆಳಿಗ್ಗೆ 6.30 ಕ್ಕೆ ಎಲ್ಲರೂ ಹಾಸ್ಟೆಲಿನಿಂದ ಹೊರಟು ಬಿಡಬೇಕೆಂದು ತಾಕೀತು ನೀಡಿದಳು. ಮುಖ್ಯವಾಗಿ ಅಂಡಮಾನಿಗೆ ಬಂದಿರುವುದು ಅಧ್ಯಯನ ಪ್ರವಾಸಕ್ಕಾಗಿ, ಕಾಲೇಜಿನ ಪ್ರಯೋಗಾಲಯಕ್ಕೆ ಬೇಕಾದಕ ವಿಶಿಷ್ಟ ರೀತಿಯ ಜಲಚರಗಳನ್ನು ಮತ್ತು ಹವಳ ಬಳ್ಳಿಗಳನ್ನು ಸಂಗ್ರಹಿಸಬೇಕಾಗಿತ್ತು. ಅಂಡಮಾನ ಒಂದು ದ್ವೀಪ ಸಮೂಹ. ಅದರಲ್ಲೂ ಹವಳ ದ್ವೀಪಗಳು ! ಅದ್ಭುತ ಮಾದರಿಯ ಜಲ ಜಂತುಗಳು ! ಹವಳ ಬಳ್ಳಿಗಳು, ನೋಡಲು ಕಣ್ಣೆರಡು ಸಾಲದು ! ನಿಸರ್ಗದ ಸೌಂದರ್ಯ ರಾಶಿಯೆಲ್ಲವೂ ಅಲ್ಲಿಯೇ ಸಂಚಯವಾಗಿರಬೇಕನಿಸುವಂತಿತ್ತು. ಅದಷ್ಟೂ ಕೆಲವು ಮಾದರಿಗಳನ್ನು ಸಂಗ್ರಹಿಸುವುದು ನಮ್ಮ ಉದ್ದೇಶವಾಗಿತ್ತು. ಹಲವಾರು ಬೀಚುಗಳಲ್ಲಿ ಉಬ್ಬರವಿಳಿದ ಕ್ಷಣಗಳಲ್ಲಿ ಅನೇಕ ಬಗೆಯ ಜಲಚರಗಳು ಹವಳ ಬಳ್ಳಿಗಳು ಹರಡಿ ಬಿದ್ದಿರುತ್ತಿದ್ದವು. ಉಬ್ಬರದ ಹೊತ್ತಿನಲ್ಲಿ ಸಮುದ್ರ ಕಲಕಿದಂತಾಗಿ ದಂಡೆಯಂಚಿನ ವರೆಗೆ ಬರುತ್ತಿದ್ದ ಅಲೆಗಳು ಇವುಗಳನ್ನು ಎಳೆದು ತಂದು ಹರಡಿರುತ್ತಿದ್ದವು. ಅದಕ್ಕಾಗಿಯೇ ಉಬ್ಬರವಿಲ್ಲದ ಸಮಯವನ್ನು ನೋಡಿಕೊಂಡು ಒಂದೊಂದು ಬೀಚನ್ನೂ ಸಂದರ್ಶಿಸಿ, ಮಾದರಿಗಳನ್ನು ಸಂಗ್ರಹಿಸಿಕೊಳ್ಳಬೇಕಿತ್ತು. ನಮ್ಮ ಬಳಿ ಪ್ರತಿಯೊಂದು ಬೀಚಿನ ಉಬ್ಬರವಳಿತಗಳ ವೇಳಾಪಟ್ಟಿ ಇದ್ದುದರಿಂದ, ಅದರಂತೆ ನಮ್ಮ ಕಾರ್ಯಕ್ರಮವನ್ನು ರೂಪಿಸಿಕೊಳ್ಳಬಹುದಾಗಿತ್ತು. ಸಂಗ್ರಹಣೆಗೆ

ಬೇಕಾದ ಗ್ಲೋವ್ಸ್, ಸಣ್ಣ ಸಣ್ಣ ಚಾಕು, ಪ್ಲಾಸ್ಟಿಕ್ ಕವರು, ಬಕೇಟುಗಳು, ದಾರದುಂಡೆ, ಮೊದಲಾದವುಗಳನ್ನು ಮರೆಯದೆ ತರಬೇಕೆಂದು ಎಚ್ಚರಿಕೆ ನೀಡಿದಳು, ಲೀಲ. ಹುಡುಗರೆಲ್ಲರೂ ಸನ್ನದ್ಧ ಸೈನಿಕರಂತೆ ಶಿಸ್ತಿನಂತೆ ನಿಂತು ಕಮ್ಯಾಂಡ್‌ಗಾಗಿ ಕಾದಿದ್ದರು. ರಾಜೇಶ್ ಧೈರ್ಯ ಮಾಡಿ,

ನಾಳೆ ಯಾವ ಕಡೆಗೆ ಹೊಗೋಣ ಸಾರ್ – ಎಂದು ಪುರುಷೋತ್ತಂ ಅವರನ್ನು ನೋಡಿದೆ.

ಪುರುಷೋತ್ತಂ ಲೀಲಾ ಕಡೆ ನೋಡಿದರು. ಯಾಕೆಂದರೆ ನಮ್ಮ ಕಾರ್ಯಕ್ರಮವನ್ನು ಡ್ರಾಫ್ಟ್ ಮಾಡುತ್ತಿದ್ದುದು ಅವಳೇ!

ಕೈಲಿ ಹಿಡಿದ ಹಾಳೆ ನೋಡಿ, ಏನೇನೋ ಗುಣುಗುಣಿಸಿ –ಹುಡುಗರನ್ನು ಸಂಬೋಧಿಸುವುದಕ್ಕಿಂತ ಮುಂಚೆ ನಮ್ಮೆಡೆ ತಿರುಗಿ ನುಡಿದಳು.

ನಾಳೆ ನಾವು ಬೆಳಗ್ಗೇನೆ ಮಂದೂರ್ ಬೀಚ್‌ಗೆ ಹೋಗೋಣ. ಅಲ್ಲಿ ಚೆನ್ನಾಗಿ ನಮಗೆ ಬೇಕಾದ ಸ್ಪೆಸಿಮನ್ಸ್ (ಜಾತಿಗಳು) ಸಿಗುತ್ತೆ. ನಾವು ತಿಂಡಿ ಊಟಗಳಿಗೆ ಕಾಯೋದು ಬೇಡ!

ಹುಡುಗರು ಹೌಹಾರಿದರು! ತಿಂಡಿ ಊಟ ಇಲ್ಲ ಅಂತ ಹೇಳುವಷ್ಟರಲ್ಲಿ ಅವರ ಉತ್ಸಾಹ 'ಧಸ್' ಎಂದಿತು. ನಾನು ಮೂಕ ಪ್ರೇಕ್ಷಕಳಾಗಿ ಗಮನಿಸುತ್ತಿದ್ದೆ. ಅಲ್ಲಿಯವರೆಗೇ ನನ್ನ ಜವಾಬ್ದಾರಿ. ಇನ್ನು ಮುಂದೆ ನನ್ನ ಜಬಾಬ್ದಾರಿ ಏನೂ ಇಲ್ಲ. ಅವರು ಹೇಳಿದಂತೆ ಅವರೊಂದಿಗೆ ನಾನೂ ಕೂಡಾ ದಂಡೆಗಳಲ್ಲಿ ಓಡಾಡುವುದು ಅಷ್ಟೆ!... ಒಬ್ಬೊಬ್ಬರ ಮುಖವನ್ನು ಗಮನಿಸಿದೆ. ಗೊಣ ಗೊಣ ಪ್ರಾರಂಭವಾಯಿತು. ಕುಮಾರ ನಮ್ಮ ತಂಡದ 'ಬಕಾಸುರ' ಪಾಪ ಹಸಿವು ತಡೆಯುವುದು ಅವನಿಂದ ಸಾಧ್ಯವಿರಲಿಲ್ಲ. ನೋಡುವುದಕ್ಕೆ ಸಾಕಷ್ಟು ಸ್ಥೂಲಕಾಯ. ಅವನೆಂದರೆ ಎಲ್ಲರಿಗೂ ತಮಾಷೆ. ಅವನನ್ನು ಹಿಂದಿನಿಂದ ಗುಮ್ಮಿದರು. ಕೇಳೋ ಕೇಳೋ ಎಂದು ಉತ್ತೇಜಿಸಿದರು – ಅವನು ಕೇಳಿಯೇ ಬಿಟ್ಟ.

– ವಾಟ್ ಮೇಡಂ, ನೋ ಫುಡ್ ! ಓಹ್ ಐ ಕಾಂಟ್ ಸ್ಟೇ ! ಎಂದ ನಿಜವಾಗಿ ಭಯಗೊಂಡು.

" ಏನೋ ಕುಮಾರ್ ನಿನಗ್ಯಾಕೋ ತಿಂಡಿ ? ಪ್ರವಾಸದಷ್ಟು ದಿವಸಕ್ಕೆ ಬೇಕಾಗೋದನ್ನೆಲ್ಲಾ ಮೊದಲೇ ತಿಂದು ಬಂದಿರೋ ಹಾಗಿದೆ ! ಇನ್ಯಾಕೆ ನಿನಗೆ ತಿಂಡಿ ?"

" ಹೌದು ಮಿಸ್ ಹೇಳ್ತಿರೋದು ಸರಿ. ನಾವು ಹೇಗಿದ್ದರೂ ಸ್ಪೆಸಿಮನ್ ಕಲೆಕ್ಷನ್‌ಗೆ ಹೋಗ್ತೀವಲ್ಲ. ಅದರಲ್ಲಿ ಏನಾದರೂ ಒಳ್ಳೇ ಮೀನು, ಸಿಗಡಿಗಳು ಸಿಕ್ಕಿದರೆ, ಹಾಗೇ ಒಂದೆರಡು ಬಾಯಿಗೆ ಹಾಕ್ಕೋ" – ಎಂದರು ಪುರುಷೋತ್ತಂ.

"ಅಯ್ಯಯ್ಯೋ ! ಛೀ ಛೀ ಅದೆಲ್ಲ ತಿನ್ನೋಲ್ಲ ಸಾರ್. ನಾವು ಪಕ್ಕಾ ಬ್ರಾಹ್ಮಣರು" – ಎಂದು ಜನಿವಾರ ತೋರಿಸಿದ. ಅವನ ಬ್ರಾಹ್ಮಣಿಕೆ ಇದ್ದಕ್ಕಿದಂತೆ ಎಚ್ಚೆತ್ತಿತ್ತು.

‘ಲೋ ಹಾಗಾದರೆ ಜುಟ್ಟೆಲ್ಲೋ’ – ಕೀಟಲೆ ನುಡಿದ ರಾಜೇಶ್.

‘ಹೋಗ್ರೋ ನೀವೊಬ್ಬರು’ ಹುಸಿ ಮುನಿದು ನುಡಿದ.

ಕೋಪಕ್ಕೋ ನಾಚಿಕೆಗೋ ಮುಖ ಕೆಂಪಗಾಯಿತು. ತಮಾಶೆ ಸಾಕಾಗಿತ್ತು.

‘ನಾವು ತಿಂಡಿಗೆ ಊಟಕ್ಕೇಂತ ಬರೋದು ಬೇಡ. ತಿಂಡಿ, ಊಟದ ಪ್ಯಾಕೆಟ್ಸ್ ಒಯ್ಯೋಣ. ಅಲ್ಲೇ ಅದನ್ನು ಮುಗಿಸಿದರಾಯಿತು. ಮೊದಲು ನಮ್ಮ ಕೆಲಸ ಆಗಬೇಕು. ಎಷ್ಟು ಸ್ಪೆಸಿಮನ್ಸ್ ಸಂಗ್ರಹಿಸಲು ಸಾಧ್ಯವೋ ಅಷ್ಟನ್ನೂ ಸಂಗ್ರಹಿಸಿ ಎಂದಳು ಲೀಲಾ.

‘ಯಾರು ಹೆಚ್ಚು ಜಾತಿ ಮೀನು ಮಾದರಿಗಳನ್ನು ಸಂಗ್ರಹಿಸುತ್ತಾರೋ ಅವರಿಗೆ ಬಹುಮಾನ ಬೇರೆ ಕೊಡ್ತೀವಿ.’

ಉತ್ತೇಜನ ನೀಡುವುದಕ್ಕಾಗಿ, ಪುರುಷೋತ್ತಂ ಘೋಷಿಸಿದರು.

ಆದರೆ ಒಂದು ಎಚ್ಚರಿಕೆ! ನಾವು ಸುತ್ತಾಡುವುದೆಲ್ಲಾ ಬೀಚುಗಳಲ್ಲಿ ; ಅಂದರೆ ನೀರಿನ ಜೊತೆಗೆ. ಯಾರೂ ತುಂಬಾ ದೂರ ನೀರಿನಲ್ಲಿ ಹೋಗಬಾರದು. ಅಲ್ಲದೆ ಟೈಡ್ಸ್ ಬರೋದಕ್ಕೆ ಮುಂಚೆ ಹಿಂದಿರುಗಬೇಕು. ಇಲ್ಲವಾದರೆ ಅಪಾಯ. ನಾಳೆ ನಾವು ಹೋಗುವ ಬೀಚಿಗೆ ಮಧ್ಯಾಹ್ನ 12.00 ಗಂಟೆಗೆ ಹೈಟೈಡ್ಸ್ (ಹೆಚ್ಚಿನ ಉಬ್ಬರ) ಬರುತ್ತವೆ. ಹುಷಾರಾಗಿರಬೇಕು –ಎಂದು ಎಚ್ಚರಿಕೆಯ ಗುಳಿಗಳನ್ನು ನೀಡಿದಳು.

ಹುಡುಗರೆಲ್ಲರೂ ವಿಧೇಯರಾಗಿ ಸೂಚನೆ, ಸಲಹೆ ಎಚ್ಚರಿಕೆಗಳನ್ನು ಸ್ವೀಕರಿಸಿದರು.

### ಬೀಚುಗಳಲ್ಲಿ ಅಂಡಲೆಯುತ್ತಾ :–

ಎಂದರೂ ಬೀಚಿಗೆ ಹೊರಡಬೇಕಾಗಿತ್ತು. 5.30ಕ್ಕೆ ಲೀಲಾಗೆ ಎಚ್ಚರವಾಗಿ ಕೇಳಿದಳು – ‘ವಿಜಿ, ನೋಡು ನಾವು ಸ್ಪೆಸಿಮನ್ ಕಲೆಕ್ಷನ್‌ಗೆ ಹೋಗ್ತಿದ್ದೀವಿ. ನೀ ಬರುವ ಹಾಗಿದ್ದರೆ ಬಾ. ಇಲ್ಲವಾದರೆ ಇಲ್ಲೇ ಇದ್ದು ರೆಸ್ಟ್ ತಗೋ’ –ಎಂದಳು.

ಅರೆ ನಿದ್ದೆಯಲ್ಲಿದ್ದೆ. ಆದರೂ ಲೀಲಾಳ ಮಾತು ಕೇಳಿಸಿತು. ನಾನು ಬಂದದ್ದೇ ದಂಡೆಗಳಲ್ಲಿ ಓಡಾಡಿ, ಹಗಲು, ಸಂಜೆ ಮಧ್ಯಾಹ್ನಗಳಲ್ಲಿನ ಕಡಲ ವೈಭೋಗವನ್ನು ಕಂಡು ಆಸ್ವಾದಿಸಲು, ಅಂಥಾದ್ದರಲ್ಲಿ ನಾನು ಈ ಕೋಣೆಯಲ್ಲಿ ತೊಲೆಗಳನ್ನು ಎಣಿಸುತ್ತಾ, ಮಂಪರು ನಿದ್ದೆಯಲ್ಲಿ ಅರ್ಥವಿಲ್ಲದಂತೆ ವೇಳೆಯನ್ನು ಕಳೆಯುತ್ತಾ ಕೂರಲೇ?

‘ಏನೇ ಇದು. ನಾನು ಬಂದಿರೋದು ನಿಮ್ಮ ಜೊತೆ ಎಂಜಾಯ್ ಮಾಡೋಕೆ. ಅದು ಬಿಟ್ಟು ಒಬ್ಬಳೇ ಕೂತು ಇಲ್ಲಿ ಏನ್ಮಾಡಲಿ? ಅಲ್ಲದೆ ನಾನೂ ಜೂ ಆಲಜಿ ವಿದ್ಯಾರ್ಥಿಯೇ ಆಗಿದ್ದೆ. ನಾನು ಕಲಿತ ಆ ಪಾಠವನ್ನು ಮತ್ತೆ ಮೆಲಕು ಹಾಕೋ ಅವಕಾಶನ ಯಾಕೆ ಕಳೆದು ಕೊಳ್ಳಲಿ....ನೋಡೋಣ ಎಷ್ಟರ ಮಟ್ಟಿಗೆ ನನ್ನ ಜ್ಞಾಪಕ ಶಕ್ತಿ ಇದೇಂತ !

... ತಡಿ ನಾನೂ ಬರ್ತೀನಿ. ಬೇಕಾದರೆ ನಾನು ಎದ್ದು ಇದನ್ನೆಲ್ಲಾ ಸರಿ ಮಾಡುವಷ್ಟರಲ್ಲಿ ನಿನ್ನ ಸ್ನಾನ ಮುಗಿಸಿ ಬಂದು ಬಿಡು. ಕೆಳಗಡೆ ಪ್ರತ್ಯೇಕವಾಗಿ ಒಂದು ಬಾತ್ ರೂಮಿದೆ. ಹುಡುಗರು ಯಾರೂ ಧಾಳಿ ಮಾಡೊಲ್ಲ. ತಂಬಿ ಹತ್ತಿರವೇ ಬೀಗದ ಕೈ ಇದೆ. ತೊಗೊಂಡು ಹೋಗು' – ಎಂದೆ.

ಅದಕ್ಕಾಗಿಯೇ ಕಾಯುತ್ತಿದ್ದಂತೆ, ಬಟ್ಟೆ ಬರೆ ತೆಗೆದುಕೊಂಡು ಇಳಿದಳು. ಹಾಗೆಯೇ ಹುಡುಗರು ಎದ್ದಿದ್ದಾರೋ ಇಲ್ವೋ ನೋಡಿಕೊಂಡು ಹೋಗು ಎಂದಿದ್ದೆ.

ಕೋಣೆಗಳೊಳಗಿಂದ ಗದ್ದಲ ಕೇಳಿಸಿತು. ಅಂದರೆ ಎದ್ದಿದ್ದಾರೆ!

ಹಾಳಾದವರು ಮಲಗಿದ್ದರೆ ತಾನೇ ಏಳೋ ಪ್ರಸಂಗ! ರಾತ್ರಿ ಇಡೀ, ಮಾತು, ಹಾಡು, ನಗು...ಅವರ ಉಲ್ಲಾಸ, ಉತ್ಸಾಹ ನೋಡಿದರೆ ಅಸೂಯೆ ಬರುವಂತಿತ್ತು. ಆದರೆ ಏನ್ಮಾಡುವುದು. ಅವರದು ಯಾವುದೇ ಸಮಸ್ಯೆಗಳು ಕಾಡದ ಮುಕ್ತ ಮನಸ್ಸು. ಅದಕ್ಕೇ, ಅವರಲ್ಲಿ ಸೊರಗಲಾರದ ಜೀವನೋತ್ಸಾಹ !

ಪುರುಷೋತ್ತಂ ಅವರ ಸಿಳ್ಳು ಕೇಳಿಸಿತು. ದಢ ದಢ ಇಳಿವ ಹೆಜ್ಜೆಗಳ ಸದ್ದು.

ಐದು ನಿಮಿಷದಲ್ಲಿ ನಮ್ಮ ವಿದ್ಯಾರ್ಥಿಗಳೆಲ್ಲಾ ಹಾಸ್ಟೆಲ್ ಮುಂದೆ ನಿಂತರು ! ಆದರೆ ಅಂಯ್ಯೋ ದೈವವೇ ! ಕ್ಷಣಾರ್ಧದಲ್ಲಿ ಮಳೆ ಶುರುವಾಯಿತು. ನಾವು ಇಲ್ಲಿಗೆ ಬಂದ ದಿನದಿಂಲೆ ಮುನಿದು ಮುಸುಕಿದ ಆಕಾಶವಿತ್ತು. ಹೀಗೆ ನಮ್ಮ ಕೆಲಸಗಳಿಗೆ ಕೈ ಕೊಡುತ್ತೇಂತ ಭಾವಿಸಿರಲಿಲ್ಲ. ಈಗೇನು ಮಾಡುವುದು ಸಾರ್ ? ಹುಡುಗರು ಕೇಳಿದರು. ನಾವು ಮೂವರೂ ಮುಖ ಮುಖ ನೋಡಿಕೊಂಡೆವು.

'ಮಳೆಯಲ್ಲಿಯೇ ಹೋಗುವ ಧೈರ್ಯ ಇದ್ದರೆ, ಹೊರಟೇ ಬಿಡೋಣ. ನಿಮ್ಮಲ್ಲಿ ಯಾರ ಯಾರ ಬಳಿ ಕೊಡೆ, ರೈನ್ ಕೋಟುಗಳಿವೆ ತನ್ನಿ' – ಎಂದಾಗ;

ಹುಡುಗರಿಗೆ ಖುಷಿಯೋ ಖುಷಿ ಮಳೆಯಲ್ಲಿ ತೋಯುವುದಕ್ಕೆ ಯಾರಿಗೆ ತಾನೇ ಸಂತೋಷವಿರೊಲ್ಲ. ಮಕ್ಕಳಿಂದ ಮುದುಕರವರೆಗೆ ಮಳೆ ಎಂದರೆ ಖುಷಿ ಪಡ್ತಾರೆ. 'ಹೋಗೋಣ ಮಿಸ್. ನಮಗ್ಯಾರಿಗೂ ಭಯವಿಲ್ಲ. ಹೇಗಿದ್ದರೂ ನಾವ್ಯಾರೂ ಸ್ನಾನ ಮಾಡಿಲ್ಲ. ಮಳೇಲೇ ಸ್ನಾನ ಮಾಡಿದರಾಯ್ತು' – ಎಂದರು.

ಹುಡುಗರ ಉತ್ಸಾಹಕ್ಕೆ ಹೆಮ್ಮೆ ಎನಿಸಿತು. ರಾಜೂನ ಕರೆದು ಕೊಡೆ, ಚೀಲಗಲನ್ನು ಕೊಟ್ಟು ಅನ್ನಪೂರ್ಣ ಹೋಟೆಲಿಗೆ ಓಡಿಸಿದೆವು. ತಿಂಡಿ ಊಟದ ಪೊಟ್ಟಣಗಳನ್ನು ತರಲು!!

ಅವನಿಗೆ ಹಾಗೆಯೇ ಅಬರ್‌ಡೀನ್ ಬಸ್ ಸ್ಟ್ಯಾಂಡಿಗೇ ಬರುವುದಕ್ಕೆ ಹೇಳಿದೆವು.

ನಾವೆಲ್ಲಾ ಆ ಸುರಿಯುವ ಮಳೆಯಲ್ಲಿಯೇ ಜೈತ್ರ ಯಾತ್ರೆಗೆ ಹೊರಡುವವರಂತೆ ಹೊರಟೆವು. ನಾವಿದ್ದ ಹಾಸ್ಟೆಲಿಂದ ಒಂದು ಕಿಲೋಮೀಟರ್ ದೂರದಲ್ಲಿತ್ತು. ಬಸ್‌ಸ್ಟ್ಯಾಂಡ್. ಅಲ್ಲಿಗೆ ನಡೆದೇ ಹೋದೆವು. ಮಳೆಯಲ್ಲಿಯೇ ಸಾಗುತ್ತಿರುವ ನಮ್ಮ ಮೆರವಣಿಗೆಯನ್ನು ಕುತೂಹಲದಿಂದ ಜನ ನೋಡಿದರು. ಮಳೆಯಲ್ಲಿ ಓಡಾಡುವುದು ಇಲ್ಲಿನ ಜನಕ್ಕೆ

ವಿಶೇಷವೇನೂ ಅಲ್ಲ. ಆದರೆ ಹುಡುಗ ಹುಡುಗಿಯರು ಇಷ್ಟೊಂದು ಸಂಖ್ಯೆಯಲ್ಲಿ ಹೀಗೆ ಇಷ್ಟಿಷ್ಟು ಹತ್ತಿರವಾಗಿ ಆಪ್ತವಾಗಿ, 7 ಗಂಟೆಗೇ ಯಾವ ದಿಗ್ವಿಜಯಕ್ಕೆ ಹೊರಟಿರಬಹುದು - ಎನ್ನುವ ಕುತೂಹಲ ಅವರ ಕಣ್ಣುಗಳಲ್ಲಿ ಇಣುಕುತ್ತಿತ್ತು. ಅದೇ ವಯಸ್ಸಿನ ಎಂಟು ಹತ್ತು ಅಲ್ಲಿನ ಹುಡುಗರು ಹಿಂದಿಯಲ್ಲಿ 'ಜಾನೇ ಕ್ಯಾಕರ್ನೆ ಆಯೆ ಹೈಂ' ಕಿತನಾ ಮಜಾ ಹೈನ? ... ಎ ಲಡಕೆ, ಲಡಕಿಯಾಂ ಸಾಥ್ ಸಾಥ್ ಮೇಂ ... ಎಂದು ಇನ್ನೂ ಏನೇನೋ ಮಾತನಾಡಿ ಕೊಂಡರು. (ಇಲ್ಲಿನ ವ್ಯವಹಾರ ಭಾಷೆ ಸಾಮಾನ್ಯವಾಗಿ ಹಿಂದಿಯೇ ಆಗಿತ್ತು) ನಮ್ಮ ಹುಡುಗಿಯರು ಧರಿಸಿರುವ ಮಿನಿಸ್ಕರ್ಟ್, ಬ್ಯಾಗಿ ಬ್ಯಾಗಿಗಳು, ಬಾಬ್ಡ್ ಹೇರ್ ಎಲ್ಲಕ್ಕಿಂತ ಹೆಚ್ಚಾಗಿ ಸ್ಟೈಲಿನ ಇಂಗ್ಲೀಷ್ - ಅವರಲ್ಲಿ ಅಸೂಯೆ ಮೂಡಿಸಿದ್ದರೆ ಆಶ್ಚರ್ಯವಿಲ್ಲ!

ರಸ್ತೆಗಳಲ್ಲಿನ ಜನರ ಕಣ್ಣುಗಳಲ್ಲಿ, ಮನಸ್ಸುಗಳಲ್ಲಿ ವಿವಿಧ ಭಾವಗಳನ್ನು ಹೊಳೆಸಿ ಬಸ್ ಸ್ಟ್ಯಾಂಡ್ ತಲುಪಿದೆವು. ಬಸ್‌ನ ವ್ಯವಸ್ಥೆ ಚೆನ್ನಾಗಿದೆ. ಇಲ್ಲಿ ಖಾಸಗಿ ವಾಹನಗಳು ಬಹಳ ಕಡಿಮೆ. ಕಾರಿನ ಜನರಂತೂ ಅಪರೂಪ. ಒಂದು, ಸರಕಾರಿ ಅಧಿಕಾರಿಗಳು (ಕೇಂದ್ರದ) ಟ್ರಾನ್ಸ್‌ಫರ್ ಆಗಿ ಬಂದಿರುವವರು, ಎರಡನೆಯದಾಗಿ ಬೇರೆ ಬೇರೆ ಕಡೆಗಳಿಂದ ವ್ಯಾಪಾರ, ಉದ್ಯೋಗಗಳಿಗಾಗಿ ಇಲ್ಲಿಗೆ ಬಂದು ನೆಲೆಸಿರುವವರು. ಮೂಲ ಅಂಡಮಾನಿಗಳಂತೂ ಕಾಣುವುದೇ ಇಲ್ಲ. ತುಂಬಾ ಶ್ರೀಮಂತರೆನ್ನುವವರು ಬಹಳ ಕಡಿಮೆ. ಅಂಡಮಾನದ ಒಳಗೇ ಓಡಾಡಲು ಬಸ್ ಅಥವಾ ಟ್ಯಾಕ್ಸಿಗಳಿವೆ. ಟ್ಯಾಕ್ಸಿ ಬೆಂಗಳೂರಿಗೆ ಹೋಲಿಸಿದರೆ ಬಹಳ ಅಗ್ಗ. 25 ರೂ. ಗಳನ್ನು ಕೊಟ್ಟರೇ ಅಂಡಮಾನಿನ ಪ್ರೇಕ್ಷಣೀಯ ಸ್ಥಳಗಳನ್ನು ಸುತ್ತಿಕೊಂಡು ಬರಬಹುದು. ಇಲ್ಲಿನ ರಸ್ತೆಗಳೋ ಭಗವಂತನೇ ಕಾಪಾಡಬೇಕು!

ಏರು, ತಗ್ಗು ಮತ್ತು ತೀರಾ ಇಕ್ಕಟ್ಟು, ಒಂದು ವಾಹನ ಹೋಗುತ್ತಿದ್ದರೆ ಇನ್ನೊಂದು ವಾಹನ ಬರುವುದಾಗಲೀ, ಹೊಗುವುದಾಗಲೀ ಸಾಧ್ಯವಿರಲಿಲ್ಲ. ಜನ ಸಾಮಾನ್ಯರ ಸಂಚಾರ ವ್ಯವಸ್ಥೆ ಬಸ್ಸೊಂದೇ. ಒಂದು ಹದಿನೈದು ನಿಮಿಷ ಬಸ್ಸಿಗಾಗಿ ಕಾಯಬೇಕಾಯಿತು.

ವಂದೂರ್ ಬೀಚ್ ಅಂಡಮಾನದ ಪ್ರಮುಖವಾದ ಬೀಚುಗಳಲ್ಲಿ ಒಂದು. ದಕ್ಷಿಣ ಅಂಡಮಾನದಿಂದ 30 ಕಿ. ಮೀ. ಪಶ್ಚಿಮಕ್ಕಿದೆ. ಈಜುವವರಿಗೆ, ಡೈವ್ ಮಾಡುವವರಿಗೆ ಬಹಳ ಪ್ರಸಕ್ತವಾದ ಜಾಗ ಸ್ವಲ್ಪ ಒಳಕ್ಕೆ, ಪಾರದರ್ಶಕ ನೀರಿನ ಪದರಗಳ ದಂಡೆಯಾದರೆ ರಸ್ತೆ ಕಡೆಗಿನ ದಂಡೆ ಕೆಸರು ಕೆಸರು. ಅದರೊಳಗಿಂದ ನೋಡಿದರೆ ದಂಡೆಯಲ್ಲಿ ಬಂಡೆ ಕಲ್ಲುಗಳ ನಡುವೆ ಮತ್ತು ಜೆಲ್ಲಿಯಂತ ಹಾಸಿನ ನಡುವೆ ವಿವಿಧ ಬಗೆಯ ಜಲಪ್ರಾಣಿಗಳು. ಹವಳ ಜೀವಿಗಳು ತಮ್ಮೆಲ್ಲ ರೂಪ, ಬಣ್ಣ ವಿನ್ಯಾಸಗಳಿಂದ, ಮನಸೂರೆಗೊಳ್ಳುವಂತಿತ್ತು. ಸಮುದ್ರ ಸಂಪತ್ತಿಗೆ ಆಗರವಾದ ಪ್ರದೇಶ ಇದು. ಆದ್ದರಿಂದಲೇ ಇದು ರಕ್ಷಿತ ಪ್ರದೇಶವಾಗಿ ಘೋಷಿತವಾಗಿ, ಖಾಸಗಿ ವ್ಯಕ್ತಿಗಳು ಯಾರೂ ಅಲ್ಲಿನ ಸಂಪತ್ತನ್ನು ಮುಟ್ಟುವುದಾಗಲಿ, ಸಂಗ್ರಹಿಸುವುದಾಗಲಿ ನಿಷೇಧಿಸಲಾಗಿದೆ. ಕೇವಲ ಸರಕಾರದ ವಸ್ತು ಸಂಗ್ರಹಾಲಯಕ್ಕಾಗಿ, ಪರವಾನಗಿ ಪಡೆದ ನುರಿತ ಡೈವರ್ಸ್ (ಮುಳುಕರು) ಇದ್ದಾರೆ. ಅವರು ಮಾತ್ರವೇ ಅಲ್ಲಿನ ಪ್ರದೇಶದಲ್ಲಿ ಡೈವ್ ಮಾಡಲು ಸಾಧ್ಯವಾಗಿದೆ. ಕಡಲಸೌತೆ, ನಕ್ಷತ್ರ ಮೀನು ಹಲವು ಬಗೆಯ ಚಿಪ್ಪಿನ ಮತ್ತು ಶಂಕಿನ ಪ್ರಾಣಿಗಳು, ಹಲವು ಬಗೆಯ ಹವಳ ಜೀವಿಗಳು - ಇಲ್ಲಿನ ಅದ್ಭುತ ನಿಸರ್ಗ ಸಂಪತ್ತಾಗಿದೆ.

ವಿದ್ಯಾರ್ಥಿಗಳಿಗೆ ಸುಗ್ಗಿಯೋ ಸುಗ್ಗಿ. ಅವರಿಗೆ ತಿಳಿಯದಂತೆ ಪ್ರಶಾಂತವಾದ ದಂಡೆ ಗುಂಟ ಎಷ್ಟೋ ಕಿ.ಮೀ. ಗಳು ನಡೆದರು. ತೀರದಲ್ಲಿ ಸಿಕ್ಕಿ ಸಿಕ್ಕಿದ್ದನ್ನು ಆಯ್ದುಕೊಂಡರು. ಕಪ್ಪೆ ಚಿಪ್ಪುಗಳು, ಶಂಖಗಳು ಅನೇಕ ಆಕಾರಗಳಲ್ಲಿ ಅನೇಕ ಸೈಜುಗಳಿದ್ದವು. ಸಣ್ಣ ಗೋಧುವೆ ಕಾಳಿನಷ್ಟು ! – ದೊರೆಯುತ್ತಿದ್ದವು. ಪಾಚಿ ಮೆತ್ತಿದ ವಿವಿಧ ಬಗೆಯ ಹವಳ ಬಳ್ಳಿಗಳು – ಕೆಲವು, ಕಂದು, ಕೆಂಪು, ಕೆಲವು ಬಿಳುಪು ! ಕೆಲವಕ್ಕೆ ಪಾಚಿ ಹತ್ತಿ ಅಚ್ಚ ಹಸುರಾಗಿದ್ದವು. ಜೀವಿಗಳ ದ್ರವದಿಂದಾಗಿ ವಾಸನೆ ಮೂಗಿಗೆ ಬಡಿಯುತ್ತಿತ್ತು.

ಹುಡುಗರ ಖುಷಿಗೆ ಮಿತಿಯಿಲ್ಲ. ತಂದಿದ್ದ ಚೀಲಗಳಲ್ಲಿ ಬೇಕುಬೇಡಗಳ ತಾರತಮ್ಯವಿಲ್ಲದೆ ತುಂಬಿಕೊಂಡರು. ಕಡಲ ಸೌತೆಗಳಂತೂ ಹೆಜ್ಜೆ ಹೆಜ್ಜೆಗೂ ದಿಂಡು ದಿಂಡಾಗಿ ಬಿದ್ದಿರುತ್ತಿದ್ದವು. ಅದರ ಜೊತೆಗೆ ಆಟವಾಡಿದರು. ಅದನ್ನು ಮುಟ್ಟಿದರೆ ಸಾಕು, ಚಿಲುಮೆಯ ರೀತಿಯಲ್ಲಿ ನೀರನಂತಹ ದ್ರವ ಚಿಲ್ಲೆಂದು ಹೊರಗೆಡಹುವುತ್ತಿತ್ತು. 'ಏಯ್ ನೋಡೇ ಸೀ ಕುಕುಂಬರ್ ಈಸ್ ಪಿಸ್ಸಿಂಗ್ – ಎಂದು ಒಬ್ಬರಿಗೊಬ್ಬರು. ಹೇಳಿಕೊಂಡು ನಗತೊಡಗಿದರು, ಲೀಲಾ, ಬೇಡ ಬೇಡವೆಂದು ಹೇಳಿದರೂ ಕೇಳದೆ ಹತ್ತೆಂಟು ಸೌತೆಗಳನ್ನು ಬಕೇಟುಗಳಲ್ಲಿ ಇರಿಸಿದರು. ಒಂದು ವಿಶಿಷ್ಟ ಜಾತಿಯ ಹೊಳೆಯುವ ನೇರಳೆ ಬಣ್ಣದ ನಕ್ಷತ್ರ ಮೀನನ್ನೂ ಹಿಡಿದರು. ಅದೊಂದು ಅಪರೂಪದ ಜಾತಿಯೆಂದು ಲೀಲಾ ವಿವರಿಸಿದಳು.

ಪ್ರತಿಯೊಂದನ್ನೂ ತಂದು ತಂದು ತೋರಿ ಆ ಪ್ರಾಣಿ ವರ್ಗ, ಜಾತಿ, ಹೆಸರು – ಇತ್ಯಾದಿಗಳನ್ನು ಕೇಳುತ್ತ ಕೇಳುತ್ತಾ ಅದೊಂದು ಪ್ರಾಯೋಗಿಕ ಮುಕ್ತ ಪಾಠಶಾಲೆಯಂತೆ ಮಾಡಿದರು.

ನನಗೂ ನನ್ನ ಜೀವ ಶಾಸ್ತ್ರಾಧ್ಯಯನದ ಪೂರ್ವ ಸ್ಮರಣೆಯಾಯಿತು. ಅವರೊಂದಿಗೆ ನಾನೂ ಅವುಗಳನ್ನೆಲ್ಲಾ ಸಂಗ್ರಹಿಸಿ, ನನ್ನ ಪಾಲಿನ ಕೊಡುಗೆಯಾಗಿ ಕಾಲೇಜಿಗೆ ಕೊಟ್ಟೆ. ನನ್ನ ಉಡಿ ತುಂಬಾ ಕಪ್ಪೆ ಚಿಪ್ಪು, ಶಂಖುಗಳು! ಆ ಕ್ಷಣಕ್ಕೆ ನಾನು ಮೇಡಂ ಅನ್ನುವುದನ್ನು ಮರೆತು ಮಕ್ಕಳಂತೆ, ಸಿಕ್ಕಿದೆಲ್ಲವನ್ನೂ ದೋಚಿ ಬಚ್ಚಿಟ್ಟುಕೊಂಡೆ. ನಮ್ಮ ಹುಡುಕಾಟ, ತಿರುಗಾಟಗಳು ಮುಗಿಯುವ ಹಾಗಿರಲಿಲ್ಲ. ಸಮಯದ ಪರಿವೆಯೋ ಇರಲಿಲ್ಲ. ಹೋಗುತ್ತಿದ್ದಂತೆ ತಿಂಡಿ ಮುಗಿಸಿ ನೀರಿಗಿಳಿದದ್ದಷ್ಟೇ ಗೊತ್ತು. 12 ಗಂಟೆ ಆಗಲಿತ್ತು. ಆಗಲೇ ಸ್ವಲ್ಪ ಸ್ವಲ್ಪವಾಗಿ ದಂಡೆ, ನೀರಿನಲ್ಲಿ ಮುಳುಗುತ್ತಾ ಹೋಯಿತ್ತು. ಇನ್ನೇನು ಉಬ್ಬರ ಶುರುವಾದರೆ, ನಾವು ನಿಂತ ಜಾಗವೂ ಗುರುತಿಲ್ಲದಂತೆ ಸಮುದ್ರದಲೆಗಳಿಂದ ಮುಳುಗಿರುತ್ತದೆ. ಹುಡುಗರನ್ನು ಎಚ್ಚರಿಸಿ ಹಿಂದಿರುಗಿ ಬರಲು ಹೇಳಿದೆವು.

ಹೊರಲಾಗದ ಹೊರೆ ಹೊತ್ತು ರಸ್ತೆ ಬದಿಗಿನ ದಂಡೆಗೆ ಬಂದರು. ದಂಡೆಯ ಇನ್ನೊಂದು ಬದಿಗೆ ಮ್ಯಾಂಗ್ರೋವ್ ಕಾಡುಗಳಿದ್ದವು. ಅಲ್ಲಿಗೆ ಹೋಗಲು ದೋಣಿಯು ಬೇಕಿತ್ತು. ನಾವು ವಿದ್ಯಾರ್ಥಿಗಳು ಅನ್ನುವುದು ಒಂದು ಕಾರಣವಾದರೆ ಅರಣ್ಯಾಧಿಕಾರಿಗಳು ನಮಗೆ ಪರವಾನಗಿ ಕೊಟ್ಟಿದ್ದರು. ಮತ್ತು ಸಂಬಂಧಪಟ್ಟ ಅಧಿಕಾರಿಗಳು, ಯಾವುದೇ ಬಗೆಯ ಸಹಾಯವನ್ನಾದರೂ ನೀಡಬೇಕೆಂದು ಶಿಫಾರಸಿನ ಪತ್ರವನ್ನೂ ನೀಡಿದ್ದರು. ಹಾಗಾಗಿ ಅದು ಕೆಲಸ ಮಾಡಿತು. "ಸಾಗರಿಕಾ" ಎಂಬ ಸಣ್ಣ ಯಂತ್ರ ಚಾಲಿತ ದೋಣಿ

ನೀರಿನಲ್ಲಿ ಅರ್ಧ ದೂರದವರೆಗೆ ಕರೆದೊಯ್ದು ಅಲ್ಲಿಂದ ತೇಲುವ ರಬ್ಬರ್ ಬೋಟಿನಲ್ಲಿ ಕಾಡುಗಳಿದ್ದ ತೀರಕ್ಕೆ ಕರೆದೊಯ್ಯಲಾಯಿತು. ನೀರಿನಲ್ಲಿನ ನಮ್ಮ ಈ ಸಾಹಸದ ಪ್ರಯಾಣ ಅದ್ಭುತ ರೋಮಾಂಚಕರವಾಗಿತ್ತು. ಅಲ್ಲಿಳಿದು ಉಪ್ಪು ನೀರಿನಲ್ಲಿ ಬೆಳೆದ ಬಗೆ ಬಗೆಯ ಮರಗಿಡಗಳನ್ನು ಶಲ್ಯ ಪರೀಕ್ಷೆ ಮಾಡುತ್ತಾ ಅವುಗಳ ನಡುವೆ ಏಳುತ್ತಾ ಬೀಳುತ್ತಾ ತರಚಿಕೊಳ್ಳುತ್ತಾ ತಣ್ಣನೆಯ ನೆರಳಿನಲ್ಲಿ ಓಡಾಡುವುದೇ ವಿಚಿತ್ರ ಅನುಭವವಾಗಿತ್ತು. ನಮ್ಮ ಜೊತೆಗೆ ಒಬ್ಬ ಡ್ರೈವರ್ (ಮುಳುಕ) ಮಾರ್ಗದರ್ಶಕನಾಗಿ ಇರದಿದ್ದರೆ ಆ ಕಾಡುಗಳಲ್ಲಿ ಎಲ್ಲಿಯೋ ಕಳೆದು ಹೋಗುವ ಸಂಭವವಿತ್ತು. ಸುತ್ತಾಡಿ ಸುತ್ತಾಡಿ ದಣಿದು, ಅಲ್ಲಿಯೇ ನಮ್ಮ ಊಟದ ಪೊಟ್ಟಣಗಳನ್ನು ಬಿಚ್ಚಿ ಪಿಕ್‌ನಿಕ್‌ನ ಆನಂದವನ್ನು ಪಡೆದೆವು. ಜೊತೆಗೆ ಮಂದೂರು ಬೀಚಿನ ರುಚಿ ಬಂದಿತ್ತು. ನನಗಂತೂ ಅಬ್ಬ ! ನಿಸರ್ಗವೇ ! ಎಂದು ಹರ್ಷದಿಂದ ಉದ್ಗರಿಸಿ ಕುಣಿಯಬೇಕೆನಿಸಿತ್ತು. 'ನೇಚರ್ ಈಸ್ ಬಾಂಟಿಫುಲ್!' -ಎಷ್ಟು ನಿಜ ಕವಿಯ ಮಾತು!

ಸಮುದ್ರ ಸೌಂದರ್ಯ ಒಂದು ರೀತಿಯದಾದರೆ. ದಂಡೆಗಿಂತ ಹೆಚ್ಚಾಗಿ ದಂಡೆ ಗುಂಟ ಹರವಿದ್ದ ಕೆಸರಿನ ಮೇಲೆ ಎಷ್ಟೊ ಮೈಲುಗಳವರೆಗೆ ಅಲ್ಲಲ್ಲಿ ಉರುಳಿ ಬಿದ್ದಿದ್ದ ಮರಗಳು ಬಿಸಿಲಿಗೆ ಒಣಗಿ, ಮಳೆಗೆ ನೆನೆದು, ಸಮುದ್ರದ ಉಪ್ಪು ನೀರನ್ನು ಸವೆಸವೆದು ಹಸುರನ್ನೆಲ್ಲಾ ಕಳೆದುಕೊಂಡು ಕಪ್ಪಗೆ ತೀರದಾಳಕ್ಕೆ ಇಳಿದು, ಮುಗಿಲಿನೆಡೆಗೆ ರೆಂಬೆ ಕೊಂಬೆಗಳನ್ನು ಚಾಚಿ ಅಡ್ಡಾ ದಿಡ್ಡಿಯಾಗಿ ಹೇಗೆಂದರೆ ಹಾಗೆ ಹರಡಿ ನೋಡುವ ಕಣ್ಣುಗಳಿಗೆ ನಿಸರ್ಗ ಶಿಲ್ಪಿಯು ರಚಿಸಿದ ಕೃಷ್ಣ ಶಿಲೆಯ ಸೂಕ್ಷ್ಮ ಕುಸುರಿಗೆಲಸದ ಕಲಾಕೃತಿಗಳಂತೆ ಕಂಡವು. ಒಮ್ಮೆ ವಸಂತ ವೈಭವದಿಂದ ಅಚ್ಚ ಹಸುರಾಗಿ ಹೂವು ಕಾಯಿ ಹಣ್ಣುಗಳಿಂದ ತೊನೆದಾಡಿದ ಈ ಮರಗಳು ಇಂದು ನಗ್ನ ಸೌಂದರ್ಯದ ಪ್ರತೀಕಗಳಾಗಿ, ಗತ ವೈಭದ ಸ್ಮಾರಕಗಳಾಗಿ ನಿಂತಿವೆ! ಬಿದ್ದು ಕೊಂಡಿವೆ! ಅಚ್ಚ ಹಸುರಿಲ್ಲದಿದ್ದರೇನಂತೆ ! ಈ ಬೋಳು ಮರಗಳ ನಿರ್ವಾಣ ಸೌಂದರ್ಯದಿಂದ ಸಂಚಲಿಸಿದ ಮನಸ್ಸಿಗೆ ಗೋಕಾಕರು ಹಾಡಿದ ಕವಿತೆ (ಬೋಳುಮರ) ಯ ಸಾಲುಗಳು ನೆನಪಾದವು. ಸಮುದ್ರ ಪ್ರಯಾಣ ಮಾಡಿದ್ದ ಅವರ ಕಣ್ಣಿಗೂ ಇಂತಹ ವಿವಿಧ ವಿನ್ಯಾಸಗಳಲ್ಲಿನ ಮರಗಳು ಸ್ಫೂರ್ತಿ ನೀಡಿರಬೇಕು. " ಮೊಗ್ಗೆಯು ಬೇಡ ! ಕುಸುಮವು ಬೇಡ ! ದಿಗಂಬರಾಕೃತಿ ಸಂಪತ್ಕೋನ ! ಅಷ್ಟೆ ಸಾಕು ನೋಡ ' - ಎಂದು ಹೃದಯ ತುಂಬಿ ಹಾಡಿದ ಕವಿಗೆ, ನಾವು ನಿರೀಕ್ಷಿಸುವ ಸಾಂಪ್ರದಾಯಿಕ ಸೌಂದರ್ಯವಿಲ್ಲದಿದ್ದರೂ ತ್ರಿಕೋನ, ತ್ರಿಜ್ಯ, ಕರ್ಣ, ವೃತ್ತ ವಿನ್ಯಾಸಗಳನ್ನು ಒಡಮೂಡಿಸುತ್ತಿರುವಾಗ ಪರ್ಣದ ಅವಶ್ಯಕತೆಯಿಲ್ಲ' - ಎನಿಸಿದರೆ ಆಶ್ಚರ್ಯವಿಲ್ಲ. ತಮ್ಮ ಪ್ರೀತಿಯೇ ನಿರಾಭರಣ ಮೂಲಗಲನ್ನು ಸೇರಿ ಜೀವ ಚೈತನ್ಯವಾಗಿ ಮರದ ರೆಂಬೆ ಕೊಂಬೆಗಳಲ್ಲಿ ಹರಿದು, ಜೀವ ರಸವಾಗಿ ಚಿಗುರು ಹೊಗರಾಗಿ, ಪ್ರೀತಿಯೇ ಕಾಯಿ ಹಣ್ಣುಗಳಾಗಿ ಜೋತಿವೆ' ಎಂದು ಹೃದಯ ತುಂಬಿ ನುಡಿದಿದ್ದಾರೆ - ಈ ಅನುಭವವೇ ನನ್ನದೂ ಆಗಿತ್ತು !

ಈ ದಿನವಂತೂ ಸಮುದ್ರ ಸಂಪತ್ತಿನ ದೊಡ್ಡರಾಶಿ ನಮ್ಮದಾಗಿತ್ತು. ಜೊತೆಗೆ ಅಷ್ಟೊಂದು ನಿಧಿ ಸಂಗ್ರಹದ ಹೆಮ್ಮೆಯೂ ನಮ್ಮ ಶ್ರೀಮಂತಿಕೆಯ ಬೊಕ್ಕಸಕ್ಕೆ ಸೇರಿತ್ತು.

ಕಣ್ಮನಗಳಲ್ಲಿ ತೃಪ್ತಿ, ಸಾರ್ಥಕತೆಯ ಭಾವವನ್ನು ತುಂಬಿಕೊಂಡಂತೆ ತಾವು ಕೊಂಡು ಹೋಗಿದ್ದ ಬಕೇಟುಗಳಲ್ಲಿ ಸಮುದ್ರ ಸಂಪತ್ತನ್ನು ತುಂಬಿಕೊಂಡು ಉಲ್ಲಾಸದ ಗರಿಬಿಚ್ಚಿಕೊಂಡು ನಮ್ಮ ಸ್ವಸ್ಥಾನವಾದ ಹಾಸ್ಟೆಲನ್ನು ಸೇರಿದೆವು.

**ದಿನಚರಿಯ ಚಿತ್ರಗಳು : –**

ನಾವು ಬಹಳ ಅಚ್ಚುಕಟ್ಟಾಗಿ ನಮ್ಮ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೆವು. ದಿನಕ್ಕೊಂದರಂತೆ ಪ್ರೇಕ್ಷಣೀಯ ಸ್ಥಳಗಳನ್ನು ಸಂದರ್ಶಿಸಿ, ಸುತ್ತಾಡಿ ಬರುವುದು, ನಮ್ಮ ಮುಖ್ಯ ಗುರಿಯಾಗಿತ್ತು. ಊರಿನೊಳಗಿನ ಸ್ಥಳಗಳನ್ನು ಒಂದೇ ದಿನದಲ್ಲಿ ನೋಡಿ ಸುತ್ತಾಡಿ ಬರಬಹುದು. ಹೆಚ್ಚು ಕಾಲ ಹಿಡಿಸುವುದಿಲ್ಲ. ಆದ್ದರಿಂದ ಅಂಡಮಾನದ ಅಲೌಕಿಕ ಸೌಂದರ್ಯದ ಅನುಭೂತಿಯಾಗಬೇಕಾದರೆ ಮೊದಲು ಅಲ್ಲಿನ ಎಲ್ಲ ಬೀಚುಗಳನ್ನು ಅಡ್ಡಾಡಿ ಬರಬೇಕು : ಸುತ್ತ ಮುತ್ತಲಿನ ಕೆಲವು ದ್ವೀಪ ಖಂಡಗಳನ್ನಾದರೂ ನೋಡಿ ಬರಬೇಕು, ಎಂದು ತೀರ್ಮಾನಿಸಿದೆವು.

ಅಂಡಮಾನ ದಂಡೆಗಳ ದೇಶ (A land of Beaches) ಒಂದೊಂದು ಬೀಚನ್ನು ಸರಿಯಾಗಿ ನೋಡಿ ಬರಬೇಕೆಂದರೆ ಒಂದು ದಿನ ಪೂರ್ತಿಯಾಗಿ ಬೇಕೇ ಬೇಕು. ಕಣ್ಣು ಹಾಯಿಸಿದಲ್ಲಿ ಹಾದು ಅಡ್ಡಾಡಿದಲ್ಲಿ ಕಾಣುವುದು ಕೇವಲ ಬೀಚುಗಳು!

ಮರುದಿವಸಕ್ಕೆ 'ಚಿಡಿಯಾ ಟಾಪು' ಬೀಚಿಗೆ ಹೋಗುವ ಯೋಜನೆ ಸಿದ್ಧವಾಯಿತು. ಎಲ್ಲ ಹುಡುಗರಿಗೂ ಸೂಚನೆಗಳನ್ನು ಕೊಟ್ಟಾಯಿತು. ನಾವು ಹೆಜ್ಜೆ ಇಟ್ಟಾಗಿನಿಂದಲೂ ಒಂದೇ ಸಮನೆ ಮಳೆ! ಆದರೂ ಚಳಿಗಾಳಿ ಮಳೆಗಳಿಗೆ ಹೆದರಿ ಕೂರುವ ಮನಃ ಸ್ಥಿತಿಯವರಾಗಿರಲಿಲ್ಲ ನಮ್ಮ ವಿದ್ಯಾರ್ಥಿಗಳು ! ಅದಕ್ಕೇ ಯಾವುದೇ ದಿನ, ಎಂತಹ ಹವೆಯೇ ಇರಲಿ ಹೋಗಬೇಕೆಂದು ಹೇಳಿದರೆ ಸಾಕು, ಹೋಗಲು ಸಿದ್ಧರಾಗುತ್ತಿದ್ದರು. ನಮ್ಮ ನಮ್ಮ ಕೋಣೆಗಳಿಗೆ ತೆರಳುವವರಿದ್ದೆವು. ಅಷ್ಟರಲ್ಲಿ ಕ್ಯಾಂಟೀನ ಹುಡುಗ ಹಡಗಿನ ಇಂಜನಿಯರ ಆಗಿದ್ದ ಲೂಯಿ ನಮ್ಮನ್ನು ಹುಡುಕಿಕೊಂಡು ಬಂದಿದ್ದ ವಿಷಯ ತಿಳಿಸಿದ. 16ನೇ ತಾರೀಖು ಹೊರಡಬೇಕಿದ್ದ ಹಡಗು ಮಳೆಯ ಕಾರಣದಿಂದ ಹೊರಟಿರಲಿಲ್ಲ. ಆತನಿಗೂ ಬೇಸರವಾಗಿದ್ದ ಕಾರಣ ನಮ್ಮ ಜೊತೆ ಸ್ವಲ್ಪ ಹೊತ್ತು ಹರಟೆ ಹೊಡೆದು ಹೋಗಲು ಬಂದಿರಬೇಕೆಂದು ಕೊಂಡೆವು. ಲೂಯಿ ಬಹಳ ಒಳ್ಳೆಯ ವ್ಯಕ್ತಿ. ಹಡಗಿನ ಪ್ರಯಾಣವಷ್ಟೂ ಕಾಲ ನಮ್ಮನ್ನು ಬಹಳ ಸ್ನೇಹ. ಆತ್ಮೀಯತೆಗಳೊಂದಿಗೆ ನಡೆಸಿಕೊಂಡಿದ್ದ. ನಮಗೆ ಯಾವುದರ ಕೊರತೆಯೂ ಆಗದಂತೆ ಎಚ್ಚರಿಕೆ ವಹಿಸಿದ್ದ. ಹುಡುಗರಿಗಂತೂ ಲೂಯಿ ಎಂದರೆ ಪ್ರಾಣ. ಅಂಥಾದ್ದರಲ್ಲಿ ಲೂಯಿ ನಮ್ಮನ್ನು ನೋಡಲು ಬರುತ್ತಾನೆಂದದ್ದೇ ಬಹಳ ಖುಷಿಯಾಯಿತು ಅವರಿಗೆ. ಲೂಯಿಯ ಬರವಿಗಾಗಿ ಹಾರೈಸಿದರು.

ಮಾತುಕೊಟ್ಟಿದಂತೆ ಸಂಜೆ ಲೂಯಿ ನಮ್ಮ ಹಾಸ್ಟೆಲಿಗೆ ಬಂದ. ವಿದ್ಯಾರ್ಥಿಗಳೆಲ್ಲ ಸುದ್ದಿ ಕಿವಿ ಮೇಲೆ ಬಿದ್ದದ್ದೇ ದಡ ದಡ ಮೆಟ್ಟಿಲುಗಳಿಳಿದು ತಮ್ಮ ತಮ್ಮ ಕೋಣೆಗಳಿಂದ

ಗೂಡಿನ ಹಕ್ಕಿಗಳು ಹೊರಬರುವಂತೆ ಬಂದು ಲೂಯಿಯನ್ನು ಒಮ್ಮೆಲೇ ಕಂಡು "ಹಲೋ ಅಂಕಲ್ ಹೇಗಿದ್ದೀರಿ? ನೀವು ಹೊರಡುವುದಕ್ಕೆ ಮೊದಲು ಬರುವುದೇ ಇಲ್ಲ ಎಂದುಕೊಂಡಿದ್ದೆವು" – ಎಂದರು.

"ಛೇ ! ಛೇ! ಹಾಗೇನೂ ಇಲ್ಲ. ಹಡಗಿನ ಕೆಲಸ ಕಾರ್ಯಗಳು. ಜೊತೆಗೆ ನೀವೂ ನಿಮ್ಮ ಕೆಲಸಗಳಲ್ಲಿರುತ್ತೀರೀಂತ ನಾನು ಬರಲಿಲ್ಲ. ಆದರೆ ಒಂದೊಂದು ಕ್ಷಣವೂ ನಿಮ್ಮ ನೆನಪು ಮಾಡಿಕೊಳ್ಳದೆ ಇರುತ್ತಿರಲಿಲ್ಲ. ನಮ್ಮ ಹಡಗು ನೀವಿಲ್ಲದೆ ಈಗ ಬಣ ಬಣಗುತ್ತಿದೆ. ಯೂ ಹ್ಯಾವ್ ಕ್ರಿಯೇಟೆಡ್ ವೆರಿಗುಡ್ ಇಂಪ್ರೆಷನ್. ಮತ್ತೆಂದು ನಿಮ್ಮನ್ನು ಕಾಣುತ್ತೇನೋ ಎನಿಸಿ ಈಗ ಓಡಿ ಬಂದೆ" – ಎಂದು ಸ್ವಲ್ಪ ನೋವಿನಿಂದ ಹೇಳಿದರು.

ಹುಡುಗರಿಗೆ ಕಡೆಯ ವಾಕ್ಯದ ಅರ್ಥವಾದಂತೆ ಕಾಣಲಿಲ್ಲ "ಯಾಕೆ ಅಂಕಲ್ ಹಾಗೆ ಹೇಳುತ್ತೀರಿ? ಮುಂದಿನ ಟ್ರಿಪ್‌ನಲ್ಲಿ ನಾವು ಬಂದೇ ಬರುತ್ತೇವೆ" ಎಂದರು.

"ಸಾರಿ ಫ್ರೇಂಡ್ಸ್. ಮುಂದಿನ ಸಲಕ್ಕೆ ಬಹುಶಃ ನಾನು ಈ ಹಡಗಿನಲ್ಲಿ ಇರಲಾರೆ! ನಾನು ಬೇರೆ ಷಿಪ್ಪಿಂಗ್ ಸಂಸ್ಥೆಗೆ ಸೇರಬಹುದೆನಿಸುತ್ತದೆ. ಅಲ್ಲಿ ನನಗೆ ಒಳ್ಳೆ ಆಫರ್ ಇದೆ. ಆದರೆ ಒಂದೇ ಒಂದು ಬೇಸರವೆಂದರೆ "ಐ ಮಿಸ್ ಯು" – ಎಂದ.

ಲೂಯಿ ಈ ಹಡಗನ್ನು ಬಿಡುತ್ತಿದ್ದಾನೆಂದು ತಿಳಿದ ಕೂಡಲೇ ಹುಡುಗರ ಮುಖ ಸಪ್ಪೆಯಾಯಿತು. ಒಮ್ಮೆಲೇ ಉತ್ಸಾಹದ ಉಕ್ಕು ಜರ್ರನೆ ಇಳಿಯಿತು. ಲೂಯಿ ಬಗ್ಗೆ ಅವರು ಬೆಳೆಸಿಕೊಂಡಿದ್ದ ಸ್ನೇಹ, ಸಲುಗೆಗಳೇ ಕಾರಣವಾಗಿತ್ತು. ಜೊತೆಗೆ ಆತನಿಲ್ಲದಿದ್ದರೆ ಬರುವಾಗ ದೊರೆತ ಅನುಕೂಲಗಳು ಹಿಂತಿರುಗುವಾಗ ದೊರೆಯಲಾರವೇನೋ ಎಂಬ ಅನುಮಾನವೂ ಅವರ ಬೇಸರಕ್ಕೆ ಕಾರಣವಾಗಿತ್ತು ಅವರಿಗೆ ಮಾತ್ರವಲ್ಲ, ಲೂಯಿಯು ನಮ್ಮ ಜೊತೆಗೆ ಹೋಗುವಾಗ ಇರುವುದಿಲ್ಲವೆಂಬ ವಿಷಯ ನಮಗೂ ದುಃಖವನ್ನುಂಟುಮಾಡಿತ್ತು. ಆದರೆ ಅವರನ್ನು ಉಳಿಸಿಕೊಳ್ಳುವುದು ನಮ್ಮ ಕೈಲಿರಲಿಲ್ಲ. ಹುಡುಗರು ಮಾತ್ರ –

" ನೋ ಅಂಕಲ್ ಯು ಲೀವ್ ದಿ ಷಿಪ್ ಆಫ್ಟರ್ ವಿ ರಿಟರ್ನ್" ಎಂದು ಸಾಮೂಹಿಕವಾಗಿ ಗೋಗರೆದರು.

" ಡೋಂಟ್ ವರಿ. ಐ ಷೆಲ್ ಮೇಕ್ ಆಲ್ ಅರೇಂಜ್‌ಮೆಂಟ್ಸ್ ಅಂಡ್ ಗೋ. ಐ ವಿಲ್ಲ ಗೀವ್ ದಿ ಲೆಟರ್. ಮೈ ಫ್ರೆಂಡ್ ಗಜರಾಜ್ ವಿಲ್ ಟೇಕ್ ಕೇರ್ ಆಫ್ ಯು." – ಎಂದು ಹೇಳಿ ಸಮಾಧಾನಪಡಿಸಿ ಭರವಸೆ ನೀಡಿ –

" ನಾಳೆ ಬೆಳಿಗ್ಗೆ ನಾನು ನಿಮಗೆ ಲೆಟರ್ ತಲುಪಿಸುತ್ತೇನೆ. ಆಲ್ ಆಫ್ ಯು ಎನ್ ಜಾಯ್ ವೆಲ್" – ಎಂದು ಹಾರೈಸಿದ.

'ಮಿಸ್ಟರ್ ಲೂಯಿ ವಿ ಆರ್ ಆಲ್ ವೆರಿ ಹ್ಯಾಪಿ ವಿತ್ ಯು. ಬಟ್ ನಾವು ಹಿಂತಿರುಗುವಾಗ ನೀವು ಇರೋದಿಲ್ಲ ಅಂತ ಕೇಳಿ ಬೇಸರವಾಗಿದೆ. ಆದರೆ ಯುವರ್ ಫ್ಯೂಚರ್. ಒಳ್ಳೇದಾಗಬೇಕಲ್ಲ! ನಾವು ಸೆಲ್ಫಿಷ್ ಆಗಲು  ಸಾಧ್ಯವಿಲ್ಲ. ನೀವು ಬೆಂಗಳೂರಿಗೆ

ಬೈ ಎನೀ ಚಾನ್ಸ್ ಬಂದರೆ ನಮ್ಮೆಲ್ಲರನ್ನು ಭೇಟಿಯಾಗಿ ಹೇಗಿದ್ದರೂ ನಮ್ಮ ವಿಳಾಸಗಳು ನಿಮ್ಮ ಬಳಿ ಇವೆಯಲ್ಲ" - ಎಂದರು ಪುರುಷೋತ್ತಮ್.

"ಸರಿ ಮಿಸ್ಟರ್ ಪುರುಷೋತ್ತಮ್ ಅಂಡ್ ಮೇಡಮ್ಸ್ ನಿಮ್ಮಿಂದ ಲೀವ್ ತಗೊಳ್ತೇನೆ. ಮತ್ತು ಎಂದಾದರೂ ಇಫ್ ಗಾಡ್ ವಿಲ್ಸ್, ಭೇಟಿಯಾಗೋಣ" ಎಂದ

"ಮಿಸ್ಟರ್ ಲೂಯಿ ಹ್ಯಾವ್ ಸಮ್ ಟೀ ಅಂಡ್ ಗೋ" - ಎಂದಳು ಲೀಲ.

" ಸಾರಿ ಐ ಫರ್‌ಗಾಟ್. ಈ ಟೀ ಪಾರ್ಟಿ ಈಸ್ ಫ್ರಮ್ ಮೈಸೈಡ್. ಇನ್ನು ನನಗೆ ಬೇರೆ ಟೈಂ ಈ ಪ್ಲೆಷರ್ ಸಿಗೊಲ್ಲ" ಎಂದ.

"ನೋ ನೋ ದಿಸ್ ಈಸ್ ಅವರ್ ಪ್ಲೆಷರ್. ನೀವು ನಮ್ಮ ಗೆಸ್ಟ್" ಎಂದೆ ನಾನು.

"ನೋ ಮೇಡಂ ಐ ಯಾಮ್ ನಾಟ್ ಯುವರ್ ಗೆಸ್ಟ್. ಐ ಯಾಮ್ ಒನ್ ಅಮಾಂಗ್ ಯು. ಸೋ ಲೆಟ್ ಮಿ ಹ್ಯಾವ್ ದಿ ಪ್ಲೆಷರ್" ಎಂದು ಒತ್ತಾಯಿಸಿದ ಮೇಲೆ ಸುಮ್ಮನಾದೆವು. ಹಾಸ್ಟೆಲ್ ಕ್ಯಾಂಟೀನಿನ ತಂಬಿಯನ್ನು ಕರೆದು ಲೂಯಿ ಟೀ ಮತ್ತು ಕೇಕು, ಚಿಪ್ಸ್‌ಗಳಿಗೆ ಆರ್ಡರ್ ಮಾಡಿದ. ಎಲ್ಲರೂ ಹಾಸ್ಟೆಲಿನ ಪ್ರವೇಶ ದ್ವಾರದ ಬಳಿ ಇದ್ದ ದೊಡ್ಡ ಹಾಲಿನಲ್ಲಿದ್ದ ದುಂಡನೆಯ ಮೇಜಿನ ಸುತ್ತ ನಿಂತುಕೊಂಡೆವು. ಮಾರಿ ಬಿಸ್ಕತ್ತುಗಳು. ಬಿಸಿಬಿಸಿಯಾಗಿ ಹೊಗೆಯಾಡುತ್ತಿದ್ದ ಚಾ ಟೇಬಲಿಗೆ ಬಂದವು. ಎಲ್ಲರೂ ತಾವಾಗಿ ಬಿಸ್ಕತ್ ಮತ್ತು ಚಾ ತೆಗೆದುಕೊಂಡೆವು.

ಅಷ್ಟರಲ್ಲಿ  ಶುರುವಾಯಿತು ಮಳೆಯುಪದ್ವ್ಯಾಪ! ಜಿಟಿ ಜಿಟಿಯಾಗಿ ಸುರಿಯುತ್ತಿದ್ದ ಮಳೆ ಈಗ ಮುಸಲ ಧಾರೆಯಾಗಿ ಬರತೊಡಗಿತು. ಜೊತೆಗೆ ಭಯಂಕರ ಬಿರುಗಾಳಿ. ಸಮುದ್ರದ ಅಬ್ಬರ ಘೋಷ. ಬೆಟ್ಟ ದೆತ್ತರದ ಅಲೆಗಳು ದಂಡೆಗೆ ಅಪ್ಪಳಿಸುತ್ತಿದ್ದುವು. ನಾವು ಇಳಿದುಕೊಂಡಿದ್ದ ವೈ. ಎಮ್. ಸಿ.ಎ. ಹಾಸ್ಟೆಲ್‌ನಿಂದ ಒಂದು ನೂರು ಹೆಜ್ಜೆ ಹಾಕಿದರೆ ಸಮುದ್ರ! ಹಾಸ್ಟೆಲಿನ ಕಿಟಕಿ ಬಾಗಿಲುಗಳು ರಪ ರಪನೆ ಬಡ ಬಡನೆ ಹೊಡೆದುಕೊಳ್ಳುತ್ತಿದ್ದವು. ಅಂತಹ ಪರಿಸ್ಥಿತಿಯಲ್ಲಿ ಟಿ.ವಿ. ಟ್ರಾನ್ಸಿಸ್ಟರ್‌ಗಳು ಕೆಲಸಮಾಡುತ್ತಿರಲಿಲ್ಲ. ಹವಾ ಗುಣ ಹೋಗಿದ್ದಾಗ ಅಂಡಮಾನಿನ ಸಂಚಾರ ವ್ಯವಸ್ಥೆಯೇ ಸ್ಥಗಿತವಾಗುತ್ತಿತ್ತು. ನಮಗೆ ಭಯ ಶುರುವಾಯಿತು. ನಾವು ಹೋಗುವಾಗ ಹೀಗೇ ಆದರೆ !? ... ಹುಡುಗರೂ ಹೆದರಿದರು. ಆದರೂ ಮಾಡುವುದು ಏನು? ಗಳಿಗೆ ಬಂದಲ್ಲದೆ ಋಣ ಹರಿದುಕೊಂಡು ಹೋಗಲಾರೆವು ಎಂದು ಮನಸ್ಸಿನಲ್ಲಿ ಅಂದುಕೊಂಡೆ.

ಲೂಯಿ ಹೊರಡಲು ಎದ್ದವನು ಈ ಮಳೆಯಿಂದಾಗಿ ಕುಳಿತುಕೊಂಡ.

ವಿನೋದ ಕಾರ್ಯಕ್ರಮ ನಡೆಯಿತು. ವಿದ್ಯಾರ್ಥಿಗಳು ತಮ ತಮಗೆ ತೋಚಿದ ಕಾರ್ಯಕ್ರಗಳನ್ನು ನೀಡಿದರು. ಹಾಡು, ಕುಣಿತ, ಮಿಮಿಕ್ರಿ ಇತ್ಯಾದಿ ಇತ್ಯಾದಿ. ಆ ಚಳಿಯಲ್ಲಿ ಮತ್ತೆ ಮತ್ತೆ ಕಾಫಿ, ಟೀ ಕುಡಿಯಬೇಕೆನಿಸಿತು.

ಹೆಚ್ಚು ಸಲ ಕಾಫಿ ಕುಡಿಯಬೇಕೆಂದರೆ ಸಾಧ್ಯವಿರಲಿಲ್ಲ. ಅಂಡಮಾನಿನಲ್ಲಿ ಎಲ್ಲಿ

ನೋಡಿದರೂ ಹಸಿರಿದ್ದರೂ ಹಸುಗಳು ಆ ಹವಾಗುಣದಲ್ಲಿ ಹೆಚ್ಚು ಕಾಲ ಬದುಕಿರಲಾರವು. ಆದ್ದರಿಂದ ಹಸುಗಳ ಸಂಖ್ಯೆ ಬಹಳ ಕಡಿಮೆ. ಹಾಲಿನ ಕೊರತೆ. ನಾವಿದ್ದ ಹಾಸ್ಟೆಲಿನಲ್ಲಿ ಜಾರ್ಜ್ ಎಂಬ ಮಲೆಯಾಳಿ ಪುಟ್ಟ ಕ್ಯಾಂಟೀನ್ ನಡೆಸುತ್ತಿದ್ದ. ನಮ್ಮ ಮೇಲಿನ ಸಹಾನುಭೂತಿಯಿಂದ ಮತ್ತೊಮ್ಮೆ ಚಹದ ವ್ಯವಸ್ಥೆ ಮಾಡಿಕೊಟ್ಟ. ಚಾ ಸೇವನೆಯಾಯಿತು. ಬೇಸರ ಕಳೆಯಲು ಹಾಡಿನ ಸುತ್ತು ಶುರುವಾಯಿತು. ಲೂಯಿ ಮತ್ತು ಹುಡುಗರ ಒತ್ತಾಯದಿಂದ ನಾನೂ ಒಂದು ಹಿಂದೂಸ್ಥಾನಿ ತುಣುಕೊಂದನ್ನು ಗುನುಗುನಿಸಿದೆ. ಎಲ್ಲರೂ ತುಂಬಾ ಹೊಗಳಿದರು. ಸಂಗೀತ ತಿಳಿಯದವರ ಮುಂದೆ ಏನೋ ದೊಡ್ಡ ಹಿಂದೂಸ್ಥಾನಿ ಗಾಯಕಿಯಂತೆ ತಲೆ ಅಲ್ಲಾಡಿಸುತ್ತಾ ಬಾಯಗಲಿಸುತ್ತ ಹಾಡಿ ಇಂಪ್ರೆಸ್ ಮಾಡಿರಬೇಕು ! ಆದರೆ ಅವರ ಹೊಗಳಿಕೆಯಲ್ಲಿ ತುಂಟತನದ ವಿನೋದವಿದ್ದರೂ ಇರಬಹುದಲ್ಲ?

ಲೂಯಿ ಹಿಂತಿರುಗಿದ. ಈಗ ಮಳೆ ಸ್ವಲ್ಪ ಕಡಿಮೆಯಾಗಿತ್ತು. ಎಲ್ಲರೂ ರಾತ್ರಿ ಊಟಕ್ಕೆ ಅನ್ನಪೂರ್ಣ ಹೋಟೆಲಿಗೆ ಹೋಗಬೇಕಿತ್ತು. ಆ ಮಳೆಯಲ್ಲಿ ಹಿಂಡು ಜನ ಹೋಗುವುದು ಬೇಸರವೆನಿಸಿ ಇದ್ದಲ್ಲಿಗೇ ಊಟದ ಪ್ಯಾಕೇಟುಗಳನ್ನು ತರಿಸಿಕೊಳ್ಳುವುದೆಂದು ತೀರ್ಮಾನಿಸಿದೆವು. ನಾಗೇಂದ್ರ ಮತ್ತು ರಾಜು ಕೊಡೆಗಳನ್ನು ತೆಗೆದುಕೊಂಡು ಹೋಟೆಲಿಗೆ ನಡೆದರು. ಹುಡುಗರು ಎದ್ದು ಹೋಗಲು ನಿಂತರು. ಆದರೆ ಲೀಲಾ ಅವರನ್ನು ತಡೆದು ಊಟ ಬಂದಮೇಲೆ, ಊಟ ಮಾಡಿ ಒಂದೇ ಸಲಹೊರಟು ಮಲಗಿಕೊಳ್ಳಿ' ಎಂದು ಅವರನ್ನು ನಿಲ್ಲಿಸಿದಳು.

**ಬೀಚುಗಳಲ್ಲಿ ಅಂಡಲೆಯುತ್ತ : –**

ಮಳೆ ! ಮಳೆ ! ಮಳೆ .... ನಿಲ್ಲದೆ ಮೇಲೆ ಮೇಲೆ ಒಂದೇ ಸಮನೆ ಸುರಿಯುವ ಮಳೆ ! ಬಿಸಿಲು – ತುಂತುರಿನ ಹಿತದ ಮಳೆ ! ... ಎದೆ ನಡುಗಿಸಿ, ಕಿವಿಗಡಚಿಕ್ಕುವ ಅಬ್ಬರದ ಮಳೆ ! ಮುಸಲ ಧಾರೆ ! ಒಂದೇ ಸಮನೆ ಏಳುತ್ತಿದ್ದ ಬಿರುಗಾಳಿ !! ಎಲ್ಲವೂ ಸ್ತಬ್ಧ !!! ... ಸ್ವಲ್ಪ ಹೊತ್ತಿನ ನಂತರ ನಗುವ ಸೂರ್ಯ ! ... ಸ್ವಚ್ಛ ಆಕಾಶ ! ಕಣ್ಣಾ ಮುಚ್ಚಾಲೆಯಾಟದ ಮಳೆ !!! ... ಯಾವುದನ್ನೂ ಖಚಿತವಾಗಿ ಹೇಳುವುದಕ್ಕೆ ಆಗುವುದಿಲ್ಲ ... ಆದರೂ ನಮ್ಮ ಹುಡುಗರು ಪೃಥ್ವಿರಾಜ್ ... ಪುರೂರವ .. ಕಟ್ಟ ಬೊಮ್ಮನ್ ... ಸಂಗೊಳ್ಳಿ ರಾಯಣ್ಣ ನಂತಹವರ ವೀರ ಪರಂಪರೆಯವರು. ಮುಂದೆ ಮುಂದೆ ಇದಕ್ಕಿಂತ ಭಯಂಕರ ಬದುಕಿನ ಸವಾಲುಗಳನ್ನು ಎದುರಿಸಬೇಕಾದವರು! ಇಂತಹ ಮಳೆಗೆ ಹೆದರಿ ಕೂರುವುದೇ ? ಉಹುಂ ... ಶಿಸ್ತಿನಿಂದ ಸಜ್ಜಾಗಿ, ಎದೆ ತಟ್ಟಿಕೊಂಡು ಮಳೆಗೆ ಮೈ ಗೊಡುತ್ತ ಹೊರಟು ನಿಂತರು. ಅವರ ಧೈರ್ಯ ಉತ್ಸಾಹಗಳೇ ನಮಗೆ ದಿಕ್ಸೂಚಿಗಳಾದವು.

ಪೂರ್ವ ನಿಶ್ಚಯದಂತೆ 'ಚಿಡಿಯಾ ಟಾಪು' ನಮ್ಮ ಅಂದಿನ ಗುರಿಯಾಗಿತ್ತು. ಹೆಜ್ಜೆ ಹಾಕಿ ನಡೆದೆವು. ಬಸ್ಸಿಗಾಗಿ ಕಾದು ಕಾಲಹರಣ ಮಾಡುವುದು ಬೇಡವಾಗಿತ್ತು. ಟ್ರೆಕ್ಕಿಂಗ್ ಮೂಡ್‌ನಲ್ಲಿದ್ದ ಹುಡುಗರು ತಮ್ಮ ಗುರಿಯ ಕಡೆಗೆ ಹೆಜ್ಜೆ ಹಾಕಿದರು. ಅಂಡಮಾನಿನಲ್ಲಿ

ದಾರಿ ತಪ್ಪಿಸಿಕೊಳ್ಳುವ ಸಾಧ್ಯತೆಗಳೇ ಇಲ್ಲ. ಎಲ್ಲಿಗೆ ಹೋದರೂ ಕಣ್ಣಳತೆಗೇ ಸಿಗುತ್ತಾರೆನ್ನುವಷ್ಟು ಹತ್ತಿರ ಹತ್ತಿರ ಜಾಗಗಳು. ಸುಮಾರು ಒಂದು ಅಥವ ಒಂದೂವರೆ ಗಂಟೆ ನಡೆದ ಮೇಲೆ 'ಚಿಡಿಯಾ ಟಾಪು' ಬೀಚನ್ನು ತಲುಪಿದೆವು ನಾವು ಅಲ್ಲಿಗೆ ಮುಟ್ಟಿದಾಗ ಇನ್ನೂ ಉಬ್ಬರವಿತ್ತು. ಅದು ಮರಳಿನ ಬೀಚಲ್ಲ; ಕಲ್ಲಿನ ಬೀಚು; ಆದ್ದರಿಂದ ಗಾಜಿನಂತೆ ಲಕಲಕಿಸುವ ನೀರಿನ ಪದರಗಳು. ಮಂಡಿಯುವರೆಗೆ ಇದ್ದ ತಣ್ಣನೆಯ, ಪಾರದರ್ಶಕವಾದ ನೀರಿನಲ್ಲಿ ಸಾಕಷ್ಟು ದೂರ ನಡೆದೆವು. ವಂದೂರಿನ ಬೀಚಿಗಿಂತ ಸುಂದರವಾಗಿತ್ತು, ಈ ಬೀಚು. ದಕ್ಷಿಣ ಅಂಡಮಾನದ ದಕ್ಷಿಣ ತುದಿಗಿದ್ದ ಇದರ ಸೌಂದರ್ಯ, ದಂಡೆಗಳ ವಕ್ರ ವಿನ್ಯಾಸ, ಸುತ್ತಲೂ ಎತ್ತೆತ್ತಲೂ ಹರಡಿ ಬಿದ್ದುಕೊಂಡಿದ್ದ 'ಡ್ರಿಫ್ಟ್‌ವುಡ್' ನ (ಮಳೆ, ಪ್ರವಾಹಗಳ ಹೊಡೆತಕ್ಕೆ ಸಿಕ್ಕಿ ಬಿದ್ದು ತೇಲಿಕೊಂಡು ಬಂದ ಸತ್ತಮರಗಳು!) ಸಹಜ, ಸ್ವಾಭಾವಿಕವಾಗಿ ಅರಳಿನಿಂದ ವಿವಿಧ ಕಲಾ ವಿನ್ಯಾಸಗಳು, ಅಗೋಚರ ಕಲಾವಿದನ ಅದ್ಭುತ ಕಲಾ ಕೃತಿಗಳಂತೆ ಕಾಣಿಸುತ್ತಿದ್ದವು. ಈ ಕಲಾ ಸೌಂದರ್ಯ ಸಮುದ್ರ ದಂಡೆಯ ಸೌಂದರ್ಯವನ್ನು ಇಮ್ಮಡಿಸಿತ್ತು ; ನೂರ್ಮಡಿಸಿತ್ತು. ದಂಡೆಯುದ್ದಕ್ಕೂ ದಟ್ಟಣಿಸಿದ ಮಳೆ ಪ್ರದೇಶದ ಕಾಡಿದ ಭಾಗಗಳು, ಅಲ್ಲಲ್ಲಿ ನೀರಿನ ನಡುವೆ ತೇಲುವ ಪುಟ್ಟ ಪುಟ್ಟ ಹಸಿರು ದ್ವೀಪಗಳಂತೆ ಗೋಚರಿಸುತ್ತಿದ್ದವು. ನಡು ನಡುವೆ ವಿವಿಧ ಆಕಾರಗಳಲ್ಲಿ ಎದ್ದು ನಿಂತ ಬಂಡೆಗಲ್ಲುಗಳು ಮಂಜು ಮುಸುಕುನ್ನು ಉಟ್ಟು ನೋಡುವವರ ಕಣ್ಮನಗಳಿಗೆ ಅಲೌಕಿಕ ಆನಂದಾನುಭೂತಿಯನ್ನು ಉಂಟು ಮಾಡುತ್ತಿದ್ದವು. ಈ ಅಪಾರ ವೈವಿಧ್ಯಮಯ ಸೌಂದರ್ಯ ರಾಶಿಯನ್ನು ನಮ್ಮ ಅನುಭೂತಿಗೆ ನೀಡುತ್ತಿರುವ ಅಗೋಚರ ಶಕ್ತಿಯ ಸ್ವರೂಪವೇನು? ಎಂದು ಯೋಚಿಸಿತು, ಮನಸ್ಸು. ಒಟ್ಟಾರೆಯಾಗಿ ಆ ದಂಡೆಯ ಪರಿಸರವು ಅನುಪಮ ಚಿತ್ರಕಲಾ ಶಾಲೆಯಂತೆ ತೋರುತ್ತಿತ್ತು.

ನೈಸರ್ಗಿಕವಾದ ಈ ಅದ್ಭುತ ಕಲಾ ಜಗತ್ತಿನ ಮುಂದೆ ಮನುಷ್ಯನ ಕೃತಕ ಸೃಷ್ಟಿ ನೀರಸವೆನಿಸಿತು. "ಎ ತಿಂಗ್ ಆಫ್ ಬ್ಯುಟಿ ಈಸ್ ಜಾಯ್ ಫಾರ್ ಎವರ್" – ಎನ್ನುವ ಸಾಲುಗಳನ್ನು ಮೆಲುಕು ಹಾಕುತ್ತಿದ್ದೆ. ಅಲೆಗಳ ಕುಣಿತ, ಕಡಲಿನ ಮೊರೆತ, ಹಕ್ಕಿಯ ಕೂಜನ, ಗಾಳಿಯ ಸೂದನ....! ... ಇವೆಲ್ಲವೂ ಏನು? ! .. ಕಾವ್ಯ ! ... ಸಂಗೀತ!...ಅಲ್ಲವೇನು?! ....! ಚಿಡಿಯಾಟಾಪಿ ನಿಂದ ಒಂದು ನೂರು ಹೆಜ್ಜೆ ದೂರದಲ್ಲಿ ಅತಿಥಿ ಗೃಹವಿದೆ. ಅಲ್ಲಿ ಬಂದು ತಂಗುವ ಅತಿಥಿಗಳಿಗೆ ಕ್ಷಣ ಕ್ಷಣವೂ ರಸದೌತಣ! .. ನೆನಸಿಕೊಂಡಾಗ ಅಸೂಯೆಯಾಯಿತು. ಇಂತಹ ಎಡೆಯಲ್ಲಿಯೇ ನಾವೂ ತಂಗಿದ್ದರೆ? – ಎನಿಸಿತು.

ಅಂಡಮಾನದ ಒಡಲ ತುಂಬ ಬೀಚುಗಳು ! ಒಂದಕ್ಕಿಂತ ಒಂದು ಸುಂದರವೆಂಬುದು ಸತ್ಯವೇ ಆದರೂ ಈ 'ಚಿಡಿಯಾ ಟಾಪು' ಮತ್ತು 'ಕಾರ್ಬಿನ್ಸ್ ಕೋವ್' ಬೀಚುಗಳು ಬಹಳ ಸುಂದರ. ಅದರಲ್ಲೂ ಈ ಕಾರ್ಬಿನ್ಸ್ ಕೋವ್ ಪೋರ್ಟ್ ಬ್ಲೇರಿನಿಂದ ಕೇವಲ ಏಳು ಕಿಲೋಮೀಟರ್ ದೂರದಲ್ಲಿದ್ದು ಅದಕ್ಕೆ ಹೊಂದಿಕೊಂಡಂತೆ ಅತ್ಯಂತ ಆಧುನಿಕವಾದ ಸುವ್ಯವಸ್ಥಿತವಾದ ಅತಿಥಿ ಗೃಹವನ್ನು ಹೊಂದಿದೆ. ಜೊತೆಗೆ ಪಕ್ಕದಲ್ಲಿಯೇ ಖಾಸಗಿ ಲಾಡ್ಜ್ ಕೂಡ ಇದೆ. ಏನಿದ್ದರೂ ಶ್ರೀಮಂತರಿಗೆ ಮತ್ತು ವಿ.ಐ.ಪಿ ಗಳಿಗೆ ಮಾತ್ರವೇ ದುಬಾರಿ

ಬೆಲೆಯ ಈ ಲಾಡ್ಜ್ ಮತ್ತು ಅತಿಥಿ ಗೃಹಗಳು ಸಾಧ್ಯ. ನಮ್ಮಂತಹವರಿಗೆ ಬರೀ ನೋಟವಷ್ಟೇ ತೃಪ್ತಿ!? ಕಾರ್ಬಿನ್ಸ್ ಕೋವಿನದು ಮರಳ ದಂಡೆ. ಕ್ಷಣ ಕ್ಷಣಕ್ಕೆ ಬಣ್ಣಗಳನ್ನು ಬದಲಿಸುವ ಸಮುದ್ರ. ಅದರ ಅಲೆಗಳ ಕುಣಿತ ಭಣಿತ ಮತ್ತು ಮೊರೆಯಷ್ಟೇ ಇಲ್ಲಿನ ವೈಶಿಷ್ಟ್ಯ. ಅಲ್ಲಿಂದ ಕದಲುವುದಕ್ಕೇ ನಮಗೆ ಮನಸ್ಸಾಗದು. ಹುಡುಗರ ಮುಖದಲ್ಲಿ ಕಾಣುತ್ತಿದ್ದ ತೃಪ್ತಿ. ಆನಂದಗಳೆ ನಮ್ಮನ್ನು ಭಾವುಕರನ್ನಾಗಿಸಿದವು.

ಈಗಾಗಲೇ ಮಳೆ ನಿಂತು ಬಾನಿನ ಮೊಗವರಳಿತ್ತು. ಒಂದಷ್ಟು ಬಿಸಿಲು ಬೆಳಕನ್ನು ಕರೆಯಿತು. ದಂಡೆಯ ಸೌಂದರ್ಯ, ನೀರಿನ ತಂಪಗಲಲ್ಲಿ ತಲ್ಲೀನರಾಗಿದ್ದ ಹುಡುಗರನ್ನು ನಿರ್ದಯರಾಗಿ, ಅವರ ರಸಭಂಗವಾಗುವಂತೆ ಸೀಟಿ ಹೊಡೆದು ಎಚ್ಚರಿಸಿ ಹಿಂತಿರುಗುವಂತೆ ಆದೇಶಿಸುತ್ತಿದ್ದೆವು. ನಮ್ಮೆಲ್ಲ ಹಿತವಾದ ಅನುಭವಗಳಿಗೆ ಸ್ವಸ್ತಿ ಹೇಳಿ ಒಲ್ಲದ ಮನಸ್ಸಿನಿಂದ ಭಾರವಾದ ಹೆಜ್ಜೆಗಳೊಂದಿಗೆ ಮರಳಿದೆವು. ಸಂಜೆಗೆ ನಮ್ಮ ಗಮ್ಯ 'ಅಬೆರ್ ಡೀನ್ ಬಜಾರ್'. ಕನಸುಗಳನ್ನು ಕೊಳ್ಳಬಹುದಾದ ಜಾಗವಾಗಿತ್ತು.

## ಭೂಲೋಕದ ಸ್ವರ್ಗ ಅಂಡಮಾನ್ :-

ಹೌದು ಅಂಡಮಾನ ನಿಜವಾಗಿಯೂ ಭೂಲೋಕದ ಸ್ವರ್ಗವೇ! ಇಲ್ಲಿನ ದ್ವೀಪ ಸಮೂಹಗಳು ನಮ್ಮೆಷ್ಟೋ ದಿನಗಳ ಸ್ವರ್ಗ ದ್ವೀಪದ ಕನಸನ್ನು ಸಾಕ್ಷಾತ್ಕರಿಸಿತ್ತು. ಓಹ್, ನಿಸರ್ಗ ಸೌಂದರ್ಯದ ಭವ್ಯತೆ ಎಂದರೆ ಇದೇ ಇರಬೇಕು! ಕಣ್ಣು ಹಾಯಿಸಿದಲ್ಲಿ ಹಸಿರ ಹಬ್ಬ. ಒಂದೊಂದು ದಿಕ್ಕಿನಿಂದಲೂ ಕೇಳಿ ಬರುತ್ತಿರುವ ಸಮುದ್ರ ಘೋಷ! ನಿಜವಾಗಿಯೂ ನಮ್ಮ ಜನ್ಮ ಸಾರ್ಥಕವೆನಿಸಿತು.

ನೋಡ ನೋಡುತ್ತಿದ್ದಂತೆ ಆಶ್ಚರ್ಯ ದಿಗ್ಭ್ರಮೆಗಳು ನನ್ನನ್ನು ಕಾಡತೊಡಗಿದವು. ಯಾವುದೋ ವಿಚಿತ್ರವಾದ ಲೋಕ ನಮ್ಮೆದುರು ತೆರೆದು ನಿಲ್ಲುತ್ತದೆಂದು ಭಾವಿಸಿದ್ದೆ. ಆದರೆ ಅಲ್ಲಿ ನನಗಾಗಿ ಎದುರಾದ ಸಂಗತಿಗಳೇ ಬೇರೆ. ಅಲ್ಲಿನ ಜನ- ಜೀವನ, ಭಾಷೆ, ನಡೆ-ನುಡಿಗಳು, ಸಂಸ್ಕೃತಿಗಳು ನಮಗಿಂತಾ ತೀರಾ ಭಿನ್ನವಿರಬೇಕೆಂದು ಯೋಚಿಸಿ ನಿರೀಕ್ಷಿಸಿದ್ದ ನನಗೆ ಒಂದೆರಡು ಮೂರು ದಿನಗಳಲ್ಲಿ ಅದೊಂದು ಪುಟ್ಟ ಭಾರತ ದೇಶದಂತೆಯೇ ಕಾಣಿಸಿತು. ವಿವಿಧ ಜಾತಿ, ಜನಾಂಗಗಳು! ವಿವಿಧ ಭಾಷೆಗಳು ! ವಿವಿಧ ಮತಗಳು !! ಆದರೂ ಜನರಲ್ಲಿ ಮತ ಭೇದ, ಭಾಷಾ ಭೇದವಿದ್ದಂತೆ ಕಾಣಲಿಲ್ಲ. ಅಲ್ಲಿ ವ್ಯವಹಾರದ ಭಾಷೆ ಹೆಚ್ಚಾಗಿ ಹಿಂದಿಯೇ ಆಗಿದೆ ! ಸದಾ ಹಸನ್ಮುಖಿಗಳು! ವಿವಿಧ ಮತಗಳು !! ಆದರೂ ಜನರಲ್ಲಿ ಮತ ಭೇದ, ಭಾಷಾ ಭೇದವಿದ್ದಂತೆ ಕಾಣಲಿಲ್ಲ. ನಮಗಂತೂ ನಮ್ಮ ಊರಲ್ಲಿಯೇ ಇರುವಂತಹ ಭಾವನೆ. ಅಪರಿಚಿತತೆ, ಹೊಸತನ, ಬೇರೆ ಕಡೆಗಳಿಂದ ಬಂದವರು, ಎನ್ನುವ ವಿಚಾರವೇ ನಮಗೆ ಸುಳಿಯಲಿಲ್ಲ. ಊಟ ತಿಂಡಿಗಳ ವಿಚಾರದಲ್ಲಿ ಹೆದರಿ ಕಂಗಾಲಾಗಿದ್ದ ನಮಗೆ ಮದ್ರಾಸಿಗಳ ಅನ್ನಪೂರ್ಣ ಹೋಟೆಲ್, ನಮ್ಮ ಪಾಲಿಗೆ ಅನ್ನಪೂರ್ಣೇಯೇ ಆಗಿದ್ದಳು. ಬೆಲೆಗಳು ದುಬಾರಿಯೇನಲ್ಲ! ಬೆಂಗಳೂರಿಗೆ ಹೋಲಿಸಿದರೂ

ನಮಗೆ ಅಗ್ಗವೆನಿಸಿತು. ಸಕ್ರಮವಾಗಿ ಹೊತ್ತು ಹೊತ್ತಿಗೆ ಬೇಕಾದ ಇಡ್ಲಿ ವಡೆ ಸಾಂಬಾರ್, ಮಸಾಲೆ ದೋಸೆ, ಪೊಂಗಲ್, ಬೋಂಡಾ, ಅನ್ನ, ಸಾರು, ಹುಳಿ, ಪಲ್ಯ ಇತ್ಯಾದಿಯೆಲ್ಲವೂ ನಮ್ಮದೇ ಶೈಲಿಯಲ್ಲಿ, ರುಚಿಯಲ್ಲಿ ದೊರೆಯುತ್ತಿತ್ತು.

## ಇತಿಹಾಸದ ಪುಟಗಳು ಹೇಳಿದ್ದು :-

ನನಗೆ ಅಂಡಮಾನದ ಐತಿಹಾಸಿಕತೆಯು, ಭೌಗೋಳಿಕತೆಯು ಬಗ್ಗೆ ತಿಳಿಯುವ ಕುತೂಹಲದಿಂದ ಒಂದಷ್ಟು ವಿಷಯ, ನಾನು ಹೋದ ಕಡೆಗಳಿಂದ ಮತ್ತು ಪುಸ್ತಕಗಳಿಂದ ಸಂಗ್ರಹಿಸಿದೆ. ರಾಜಕೀಯ ಖೈದಿಗಳನ್ನು ಇಷ್ಟುದೂರ ದ್ವೀಪಾಂತರ ವಾಸಿಗಳಾಗಿ ಕಳುಹಿಸುತ್ತಿದ್ದುದು, ಕಪ್ಪು ನೀರಿನ ಶಿಕ್ಷೆಯೆಂದು ಕರೆಯುತ್ತಿದ್ದುದು ನೆನಪಾಗಿ ಯೋಚಿಸತೊಡಗಿದೆ. ಈ ಬ್ರಿಟಿಷರಿಗೆ ಇದರ ಬಗ್ಗೆ ಹೊಳೆದದ್ದು, ಇದನ್ನೇ ಭಾರತೀಯ ಸ್ವಾತಂತ್ರ್ಯ ಹೋರಾಟಗಾರರಿಗೆ, ದ್ರೋಹಿಗಳೆಂಬ ಪಟ್ಟ ಕಟ್ಟಿ, ಶಿಕ್ಷಾ ಕೇಂದ್ರವಾಗಿ ಬಳಸುವ ಪ್ರೇರಣೆ ಬದದ್ದು ಹೇಗೆಂಬುದು ನನಗೆ ಅರ್ಥವಾಗಲಿಲ್ಲ. ಖೈದಿಗಳಿಗೆ ಇದು ಸುರಕ್ಷಿತವಾದ ಸ್ಥಳ!! ಇಲ್ಲಿಂದ ತಪ್ಪಿಸಿಕೊಂಡು ಹೋಗುವುದು ದೂರದ ಕನಸು! ನಿಜವಾಗಿಯೂ ಅಂಡಮಾನಕ್ಕೆ ಬಹಳ ಪುರಾತನವಾದ ಇತಿಹಾಸವಿದೆ. ನಮ್ಮ ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ ನೋಡಿದಾಗಿ ಅಂಡಮಾನ ದ್ವೀಪ ಗುಚ್ಛ ಒಂದು ಭವ್ಯವಾದ, ಮಹತ್ವದ ರಾಷ್ಟೀಯ ಸ್ಮಾರಕವಾಗಿದೆ. ಕಪ್ಪು ಕಡಲಾದ ಬಂಗಾಳ ಕೊಲ್ಲಿಯ ನಡುವೆ ಹೊಳೆ ಹೊಳೆವ ಜಲಲ ಮೇಖಲೆಯಿಂದಾವರಿಸಿದ ದ್ವೀಪಮಾಲೆ, ಅಂಡಮಾನ್ ಮತ್ತು ನಿಕೋಬಾರ್ ಗಳು. ಸುಮಾರು 725 ಕಿ.ಮೀ. ಉದ್ದದ ಈ ದ್ವೀಪಗುಚ್ಛ ಅಥವಾ ದ್ವೀಪಮಾಲೆ ನಿಸರ್ಗ ಪ್ರಿಯರ ಕನಸಿನ ಸ್ವರ್ಗ. ಈ ದ್ವೀಪ ಸಮೂಹ ಜನ ಸಂಪರ್ಕಕ್ಕೆ ಅಷ್ಟು ಸುಲಭ ಸಾಧ್ಯವಲ್ಲವಾದ್ದರಿಂದಲೇ ಮಳೆ ಕಾಡುಗಳಿಂದ (Rain Forest) ಕೂಡಿದ ದ್ವೀಪಗಳಿಂದ ಸೊಬಗು ಸೌಂದರ್ಯಗಳು ಕಲುಷಿತಗೊಳ್ಳದೆ, ಪರಿಶುದ್ಧವಾಗಿದೆ. 21ನೇ ಶತಮಾನದಲ್ಲಿ ಕಾಲಿಟ್ಟಿರುವ ನಮ್ಮ ಅತ್ಯಂತ ನವ ನಾಗರೀಕ ಸಂಸ್ಕೃತಿಯ ಸೋಂಕೂ ಇಲ್ಲದ ಅಲೆಮಾರಿ ಗುಡ್ಡಗಾಡಿನ ಆದಿ ಮಾನವ ಜಾತಿಗಳು ಮುಕ್ತವಾಗಿ ಅದ್ಭುತ, ರಮ್ಯ ಪ್ರಕೃತಿಯ ಮಡಿಲ ರಕ್ಷಣೆಯಲ್ಲಿ, ನೆರಳ ತಂಪಿನಲ್ಲಿ, ಆ ಪರಿಸರದ ಅವಿಭಾಜ್ಯ ಸತ್ವಗಳಾಗಿ ನಾಗರೀಕತೆಯ ಹುಟ್ಟು ಪೂರ್ವ ಸ್ಥಿತಿಯಲ್ಲಿಯೇ ಬದುಕುತ್ತಿವೆ. ಈ ಜನ ಜಾತಿಯವರನ್ನು ನೋಡುವುದಾಗಲಿ ತಲುಪುವುದಾಗಲಿ ಅಸಾಧ್ಯದ ಮಾತಾಗಿದೆ. ಅಂಡಮಾನದ ದ್ವೀಪಗಳ ಮೂಲ ನಿವಾಸಗಳಲ್ಲಿ ಇರುವ ಮುಖ್ಯ ಜಾತಿಗಳೆಂದರೆ ಓಂಗೆಗಳು, ಜಾರವಾಗಳು, ಶೋಂಬಿಯನ್ನರು, ಸೆಂಟಿನಲ್ಲರು. ನಿಕೋಬಾರಿಯರು ಬದಲಾಗುತ್ತಿರುವ ಸಂಸ್ಕೃತಿ ನಾಗರೀಕತೆಗಳ ಪ್ರಭಾವಕ್ಕೆ ಒಳಗಾಗಿ, ಶಿಕ್ಷಣ, ಉದ್ಯೋಗ ಮತ್ತು ಫ್ಯಾಷನ್ನುಗಳಿಗೆ ತೆರೆದುಕೊಂಡಿದ್ದಾರೆಯೇ ಹೊರತು ಮಿಕ್ಕ ಜನ ಜಾತಿಗಳು, ಸರಕಾರದ ತಡೆಯಿಲ್ಲದ ಪ್ರಯತ್ನಗಳಿಂದಲೂ ಬದಲಾಗದೆ ದಟ್ಟವಾದ ಒಳಕಾಡುಗಳಲ್ಲಿಯೇ ಬದುಕುತ್ತಿದ್ದಾರೆ.

ಹಾಗಾಗಿ ಅಂಡಮಾನದ ಸದ್ಯದ ಜನ ಜಾತಿಗಳೆಂದರೆ, ಕಲ್ಕತ್ತಾ, ಮದರಾಸ್, ಆಂಧ್ರ, ಕರ್ಣಾಟಕ, ಉತ್ತರ ಪ್ರದೇಶಗಳಿಂದ, ವ್ಯಾಪಾರ ಉದ್ಯೋಗ ಮತ್ತು ಕೂಲಿಗಾಗಿ ಬಂದು ನೆಲೆಸಿದವರೇ ಆಗಿದ್ದಾರೆ. ಜೊತೆಗೆ ರಾಜಕೀಯ ಹೋರಾಟದಲ್ಲಿ ಭಾಗವಹಿಸಿ, ಕಪ್ಪು ನೀರಿನ ಶಿಕ್ಷೆಗೆ ಒಳಗಾದವರ ವಂಶಜರು, ಮುಖ್ಯವಾಗಿ ಅಲ್ಲಿಯೇ ನೆಲೆಸಿಬಿಟ್ಟಿದ್ದಾರೆ. ಬೇರೆಯವರಿಗೆ, ಹೋಲಿಸಿದರೆ ಬಂಗಾಳಿಗಳೇ ಹೆಚ್ಚಾಗಿದ್ದಾರೆ. ಅಲ್ಲಿನ ಬೀದಿಗಳೂ ಕಲ್ಕತ್ತಾದ ನೆನಪನ್ನು ತರುವಂತಹ ಬರ್ಚ್ ಗಂಜ್, ಬಂಬೂ ಫ್ಲಾಟ್, ಜಿರ್ಖಾಗಂಜ್, ಮಂಜೇರಿಬಾಗ್, ತಾತು ಬಸ್ತಿ, ಜಂಗ್ಲಿಘಾಟ್, ಕಾಲಿಕಟ್, ಬುನಿಯಾದಿ ಬಾದ್, ಶಾದೀಪುರ ಇತ್ಯಾದಿಗಳಾಗಿವೆ. ದಕ್ಷಿಣ ಅಂಡಮಾನ್, ಉತ್ತರ ಅಂಡಮಾನ, ಮಧ್ಯ ಅಂಡಮಾನ್‌ಗಳು ಒಟ್ಟಿಗೆ ಸೇರಿ ಬೃಹತ್ ಅಂಡಮಾನ್ ಎಂದು ಕರೆಸಿಕೊಂಡಿದೆ. ದ್ವೀಪದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಇರುವ ಸಂಚಾರ ಸೌಲಭ್ಯವೆಂದರೆ ಯಂತ್ರ ಚಾಲಿತ ನಾವೆಗಳು ನಿಕೋಬಾರಿಗೆ ಮಾತ್ರ ಹಡಗು ಮತ್ತು ಹೆಲಿಕಾಪ್ಟರ್ ವ್ಯವಸ್ಥೆ ಇದೆ.

**ವಿಸ್ಮಯ : –**

ಅಂಡಮಾನ್ ದ್ವೀಪ ಸಮೂಹ ಬೆಳಕಿಗೆ ಬಂದದ್ದಾದರೂ ಒಂದು ನಿಗೂಢ ವಿಸ್ಮಯ. ಯಾರಿಂದ ಯಾವಾಗ ಇವುಗಳ ಪತ್ತೆಯಾಯಿತೆಂಬುದು ನಿರ್ದಿಷ್ಟವಾಗಿ ತಿಳಿದುಬಂದಿಲ್ಲವಾದರೂ 13ನೇ ಶತಮಾನದಲ್ಲಿ ರೋಮಿನ, ಭೂಗೋಳ ಶಾಸ್ತ್ರಜ್ಞನೂ, 15ನೇ ಶತಮಾನದಲ್ಲಿ ಇಟಲಿಯ ನಿಕೋಲೋಕೊಂತಿ ಈ ದ್ವೀಪದ ಸಮೂಹವನ್ನು ಗುರುತಿಸಿದರೆಂಬ ನಂಬಿಕೆಯಿದೆ. ನಿಕೋಲೋಕೊಂತಿಗೆ ಇವು ಸ್ವರ್ಣ ದ್ವೀಪಗಳು !!

ಅಂಡಮಾನದ ನಿಷ್ಪತ್ತಿಯನ್ನು ಹನುಮಾನದಿಂದ ಗುರುತಿಸಿ ನಮ್ಮ ಪುರಾಣಗಳು ಅದರೊಂದಿಗೆ ಒಂದು ಕತೆ ಹೆಣೆದಿದ್ದಾರೆ. ಹನುಮಂತ ಲಂಕೆಗೆ ಹೋಗುವಾಗ ಇವುಗಳನ್ನು ಸೋಪಾನಗಳಂತೆ ಬಳಸಿದನಂತೆ!

ಇದಕ್ಕೆ ಸಂಬಂಧಿಸಿದ ಕಟ್ಟು ಕತೆಗಳು ಏನೇ ಇರಲಿ, ಇದೊಂದು ನಿಸರ್ಗ ರಮ್ಯತಾಣ. ಅಂಡಮಾನವೊಂದು ನಿಜವಾಗಿಯೂ 'ದ್ವೀಪಸುಂದರಿ'. ಅಲೆನಿರಿಗಳ ಸೀರೆಯುಟ್ಟು, ಹಸುರ, ಕುಸುರಿ ಮುಸುಕ ಹೊದ್ದು! ಚಿಕ್ಕಿ ಮಲ್ಲೆ ದಂಡೆ ಮುಡಿದು! ತುಟಿಗೆ ಅರುಣ ರಾಗ ಬಳಿದು! ಹಣೆಗೆ ಚಂದ್ರ ಬೊಟ್ಟ ನಿಟ್ಟು ! ತೆಂಗು ಚವರಿ ಸೇವೆಯಲ್ಲಿ! ಮರದ ಪಚ್ಚೆ ನೆರಳಿನಲ್ಲಿ ! ಗಿರಿ ಗಿರಿಗಳಲ್ಲಿ ಅಲೆದು ! ಬನ ಬನಗಳಲ್ಲಿ ಬೀಗಿ ನಡೆವ ! ಬೆಡಗಿ ಹುಡುಗಿ ಇವಳು – ಎಂಬುದರಲ್ಲಿ ಸಂಶಯವೇ ಇಲ್ಲ. ಆ ಕ್ಷಣವೇ ಎಲ್ಲ ಮರೆಗು, ಎಲ್ಲವನ್ನೂ ಬಿಸುಟು ಬೀಸಿ ಕರೆಯುತ್ತಿರುವ ದಂಡೆ ಮರಳಿನ ಮೇಲೆ ಉನ್ಮತ್ತಳಂತೆ ಮರೆತು ಹೊರಳಾಡಬೇಕೆನಿಸಿತು.

ಅಂಡಮಾನದ ದ್ವೀಪ ಸಮೂಹಗಳ ವಿಸ್ತೀರ್ಣ 6340 ಚದರ ಕಿ.ಮೀ. 7144 ಚ.ಕಿ. ಮೀಟರ್ ಕಾಡು ಪ್ರದೇಶವಾದರೆ, ವ್ಯವಸಾಯ ಯೋಗ್ಯವಾದದ್ದು 1149 ಕಿ.ಮೀ. ಸರಾಸರಿ ವಾರ್ಷಿಕ ಮಳೆ 318 ಕ್ಯೂ.ಮೀ. ಉಷ್ಣಾಂಶ, ಗರಿಷ್ಟ $-30^{0}$ ಸೆಲ್ಸಿಯಸ್ ಆದರೆ ಕನಿಷ್ಟ $23^{0}$ ಸೆಲ್ಸಿಯಸ್. 1981ರ ಜನಗಣತಿಯ ಪ್ರಕಾರ, 1,88,741 ಇಲ್ಲಿನ ಜನಸಂಖ್ಯೆ,

ಇಲ್ಲಿನ ಅತ್ಯಂತ ಎತ್ತರವಾದ ಶಿಖರವೆಂದರೆ 'ಸ್ಯಾಡಲ್ ಪೀಕ್' ಇದು ಉತ್ತರ ಅಂಡಮಾನದಲ್ಲಿದೆ. ಇಲ್ಲಿನ ಮುಖ್ಯವಾದ ಬೆಳೆ ತೆಂಗು, ಕೌಂಗು, ಅಡಿಕೆ ಮತ್ತು ಸಂಬಾರ ಪದಾರ್ಥಗಳು, ಮುಖ್ಯ ಕೈಗಾರಿಕೆಗಳು – ಮರಗೆಲಸ ಮತ್ತು ಷೆಲ್‌ನಿಂದ ಸೌಂದರ್ಯೋಪಕರಣಗಳ ತಯಾರಿಕೆ.

ಇನ್ನೂ ಕೆಲವು ದಿನಗಳು ಅಲ್ಲಿದ್ದು ಅಂಡಮಾನನ್ನು ಸಮಗ್ರವಾಗಿ ಜಾಲಿಸಿ ಬಿಡಬೇಕೆನಿಸಿತು. ಹುಡುಗರು ಷಾಪಿಂಗಿಗೆ ಹೋದಾಗ ನಾನೂ ಹೋಗಿದ್ದರೆ ಚೆನ್ನಾಗಿತ್ತು ಎನಿಸಿತು. ಈಗಲೂ ಏನಾಯಿತು! ಹಾಸ್ಟೆಲಿನಿಂದ ಎರಡು ನಿಮಿಷ ಬಜಾರಿನ ದಾರಿ. ಬೇಗ ಬೇಗ ಲೂಬ್ರರಿಯಿಂದ ಹಾಸ್ಟೆಲಿಗೆ ಧಾವಿಸಿದೆ. ಲೀಲಾ ಆಗಲೇ ಅಲ್ಲಿದ್ದಳು. ಅವಳನ್ನೂ ಜೊತೆಗೆ ಕರೆದೆ. ಮಾಡುವುದಕ್ಕೆ ಬೇರೇನೂ ಇರಲಿಲ್ಲ. ರಾತ್ರಿ 8 ಗಂಟೆಗೆ ಊಟ, ಅಲ್ಲಿಯವರೆಗೂ ಮಾಡುವುದಾದರೂ ಏನು? ಹುಡುಗರೆಲ್ಲ ಅಬರ್ ಡೀನ್ ಬೀದಿಗಳಲ್ಲಿ, ಚೌಕಗಳಲ್ಲಿ ಅಲೆದಾಡುತ್ತಿದ್ದರು. ಊರಿನ ಜನರೆಲ್ಲರ ದೃಷ್ಟಿ ನಮ್ಮ ಮೇಲೆ ! ಅಲ್ಲಿನ ಜನಕ್ಕೆ ನಾವೆಲ್ಲ ಒಂದು ವಿಚಿತ್ರ ಮತ್ತು ಆಶ್ಚರ್ಯದ ವ್ಯಕ್ತಿಗಳಂತೆ ಕಂಡಿರಬೇಕು. ಗುಂಪುಗುಂಪಾಗಿ ಹುಡುಗ ಹುಡುಗಿಯರು ಸ್ವಚ್ಛಂದವಾಗಿ ಆತ್ಮೀಯವಾಗಿ ಜೊತೆ ಜೊತೆಗೆ ಓಡಾಡುವುದು ಮಡಿವಂತಿಕೆಯ ಕಣ್ಣಿಗೆ ಆಶ್ಚರ್ಯವಾಗಿ ತೋರಿರಬೇಕು. ಅದಕ್ಕೆಂದೇ ಹೋಗುವಾಗ, ಬರುವಾಗ, ಜನ ಮೊದಲೊಂದೆರಡು ದಿನ ಯಾವುದೋ ಉತ್ಸವವನ್ನೂ ಮೆರವಣಿಗೆಯನ್ನೂ ನೋಡುವಂತೆ ನೊಡುತ್ತಿದ್ದರು. ಆದರೆ ದಿನ ಕಳೆದಂತೆ ಜನ ಹತ್ತಿರವಾದರು. ಅಪರಿಚಿತರಾದರೂ ಕರೆದು ಮಾತನಾಡಿದರು. ನಮ್ಮೆಲ್ಲರನ್ನು ಅಲ್ಲಿ ನೋಡಿ ಅವರಿಗೆ ಹೆಮ್ಮೆ ಎನಿಸುತ್ತಿದೆ, ಎಂದರು.

ಅಂಡಮಾನದಲ್ಲಿ ನೋಡಬೇಕಾದ್ದು ಇನ್ನೂ ಹಲವು ಸ್ಥಳಗಳು ಉಳಿದಿದ್ದವು. ನಗರ ದರ್ಶನ ಅಲ್ಲಿನ ಕಾರ್ಖಾನೆಗಳು, ಜೂ, ಮ್ಯೂಸಿಯಂ, ಸೆಲ್ಲಯುಲಾರ್ ಜೇಲ್, ಸಿಪ್ಪಿಘಾಟ್, ಆಸ್ಟ್ರೋಲಾಜಿಕಲ್ ಮ್ಯೂಸಿಯಂ, ಅಲ್ಲಿನ ಕಾಲೇಜು, ಅಲ್ಲದೆ ಹತ್ತಿರದ ಮೂರು ನಾಲ್ಕು ಸುಂದರ ದ್ವೀಪಗಳು – ಹೀಗೆ ಅನೇಕ ಪ್ರೇಕ್ಷಣೀಯ ಸ್ಥಳಗಳಿದ್ದವು. ಅವೆಲ್ಲವನ್ನೂ ತಪ್ಪದೆ ನೋಡಬೇಕು. ಸಾಧ್ಯವಾದರೆ ಮೂಲನಿವಾಸಿಗಲಲ್ಲಿ ಕೆಲವರನ್ನಾದರೂ ನೋಡಬೇಕೆನಿಸಿತು.

ಹೇಗಾದರೂ ಮಾಡಿ ಯಾರನ್ನಾದರೂ ಹಿಡಿದು ಆ ಜನ ಜಾತಿಗಳು ಇರುವ ಪ್ರದೇಶದ ಸುತ್ತ ಮುತ್ತಲೂ ಅಡ್ಡಾಡಿ ದೂರದಿಂದಲಾದರೂ ಅವರ ಒಂದು ಝಲಕು ಪಡೆಯಬೇಕೆನಿಸಿತು. ಅದಕ್ಕೆ ಅವಕಾಶವಿದ್ದದ್ದು ಆಂತ್ರೋಪಾಲಾಜಿಕಲ್ ಸರ್ವೇ ಆಫ್ ಇಂಡಿಯಾ ಆಫೀಸಿಗೆ ಫೋನ್ ಮಾಡಿ ತಿಳಿದುಕೊಳ್ಳುವುದು. ನಮ್ಮ ಗೆಳೆಯರೊಬ್ಬರ ಸಂಬಂಧಿ ಸುಬ್ಬುಕೃಷ್ಣ ಎಂಬುವವರು ಆ ಕಛೇರಿಯಲ್ಲಿ ಸಂಶೋಧನ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಖಂಡಿತವಾಗಿಯೂ ಅವರ ನೆರವಿನಿಂದ ಒಂದು ಸಣ್ಣ ಲಾಂಚನ್ನು ವ್ಯವಸ್ಥೆ ಮಾಡಿಕೊಂಡ ಹೋಗಬಹುದೆನಿಸಿತು. ಲೀಲಾಗೆ ನನ್ನಾಸೆ ಹೇಳಿದೆ.

ತಕ್ಷಣವೇ ನಾನೂ ಲೀಲಾ ಸುಬ್ಬು ಕೃಷ್ಣ ಅವರಿಗೆ ಫೋನ್ ಮಾಡಿದೆವು. ಮರುದಿನ ಬೆಳಿಗ್ಗೆ ಕಚೇರಿಗೆ ಬಂದರೆ ಸಾಧ್ಯ ಸಾಧ್ಯತೆಗಳ ಬಗ್ಗೆ ಹೇಳುವುದಾಗಿ ಹೇಳಿದರು. ಅಷ್ಟರ

ಮಟ್ಟಿಗೆ ನಮಗೆ ಭರವಸೆ ದೊರೆಯಿತು.

ಮಾತಿನಂತೆ ಮರುದಿವಸ ನಾನೂ ಲೀಲಾ ಸುಬ್ಬುಕೃಷ್ಣ ಅವರ ಕಚೇರಿಗೆ ಹೊರಟೆವು. ಹುಡುಗರನ್ನು ಕರೆದುಕೊಂಡು ಪುರುಷೋತ್ತಂ ಅವರು ಅಂಡಮಾನಿನ ಮುಖ್ಯ ಭಾಗಗಳನ್ನು ತೋರಿಸಿಕೊಂಡು ಬರುವಂತೆ ಹೇಳಿ ನಾವು ಅಲ್ಲಿಂದ ಜಾರಿಕೊಂಡೆವು.

ಸುಬ್ಬುಕೃಷ್ಣ ಅವರು ನಮಗಾಗಿ ಕಾದು ಕುಳಿತಿದ್ದರು. ಕಛೇರಿಯೊಳಗೆ ಕಾಲಿಡುತ್ತಿದ್ದಂತೆಯೆ ಯಾವುದೋ ಪ್ರಾಚೀನ ವಸ್ತು ಸಂಗ್ರಹಾಲಯದೊಳಕ್ಕೆ ಪ್ರವೇಶಿಸಿದಂತೆನಿಸಿತ್ತು. ಅವುಗಳನ್ನು ಒಂದೂ ಬಿಡದಂತೆ ನೋಡಬೇಕೆನಿಸಿತು. ಆದರೆ ಅದಕ್ಕೆ ಮೊದಲು ಸಭ್ಯತೆಯಿಂದ ನಡೆದುಕೊಳ್ಳಬೇಕಾದ ಅಗತ್ಯವೊಂದಿತ್ತು. ಪ್ರವೇಶಿಸುತ್ತಿದ್ದಂತೆ " ಹಲೋ ನಮಸ್ಕಾರ ಸಾರ್ ನಾನು ವಿಜಯಾ. ಇವರು ಲೀಲಾ ಅಂತ ಪರಿಚಯಿಸಿಕೊಂಡೆವು. ಪ್ರತಿ ನಮಸ್ಕಾರ ಮಾಡಿದವರು ತಮ್ಮೆದುರಿನ ಕುರ್ಚಿಗಳನ್ನು ತೋರಿದರು. ನಾವಿಬ್ಬರೂ ಕುಳಿತುಕೊಳ್ಳುತ್ತಲೆ ಕೇಳಿದವು. – " ಅಲ್ಲ ಸಾರ್ ಇಲ್ಲಿನ ಮೂಲ ನಿವಾಸಿಗಳಾದ ಓಂಗೆ , ಜಾರವಾ, ಶೋಂಪೆನರನ್ನು ನೋಡುವುದಕ್ಕೆ ಮತ್ತು ಅವರಿರುವ ಜಾಗಕ್ಕೆ ಹೋಗುವುದಕ್ಕೆ ಆಗೋದಿಲ್ವಾ?" ಎಂದೆವು.

ಅವರು ನಕ್ಕು ಹೇಳಿದರು. ಪ್ರಾಣದಿಂದ ಉಳಿಯಬೇಕೆಂದರೆ ಆ ಸಾಹಸ ಬೇಡ, ನಾವೇ ಎಷ್ಟೊಸಲ ಪ್ರಯತ್ನ ಪಟ್ಟು ಹಿಂತಿರುಗಿದ್ದೇವೆ. ಅವರಿರುವ ಜಾಗದವರೆಗೆ ಹೋಗಲು ಇನ್ನೂ ಸಾಧ್ಯವಾಗಿಲ್ಲ. ಆಂತ್ರೋಪಾಲಾಜಿಕಲ್ ರೀಸರ್ಚ್ ಮಾಡ ಹೊರಡುವವರು ಸುಮಾರು ತಿಂಗಳುಗಳ ಕಾಲ ದೋಣಿಗಳಲ್ಲಿ ಸ್ವಲ್ಪ ಸ್ವಲ್ಪ ದೂರವೇ ಹೋಗಿ ಅವರ ಸ್ನೇಹಕ್ಕೆ ಪ್ರಯತ್ನಿಸುತ್ತಾರೆ. ಅವರಿಗೆ ಬೇಕಾಗುವ ಆಹಾರ ಪದಾರ್ಥ, ತಂಬಾಕು, ತೆಂಗಿನ ಕಾಯಿಗಳ ಆಮಿಷವೊಡ್ಡಿ ಕ್ರಮೇಣ ಅವರೊಳಗೆ ಸೇರುತ್ತಾರೆ. ಇಲ್ಲವಾದಲ್ಲಿ ದೂರದಿಂದಲೇ ತೀಕ್ಷಣವಾದ ವಿಷಪೂರಿತ ಬಾಣಗಳನ್ನೆಸೆದು ಕೊಲ್ಲುತ್ತಾರೆ. ಇಲ್ಲೀವರೆಗೆ ಒಂದು ನಾಲ್ಕೈದು ಜನ, ಇಬ್ಬರು ವಿದೇಶೀಯರು, ಭಾರತೀಯರೊಂದು ಮೂರು ಮಂದಿ ಅವರಿರುವ ಕಾಡುಗಳ ಒಳ ಹೊಕ್ಕು ಅವರ ಸ್ನೇಹಗಳಿಸಿ ಅವರ ಜೀವನ ವಿಧಾನವನ್ನು ತಿಳಿದುಕೊಂಡು ಬಂದು ಅವರು ಸಂಗ್ರಹಿಸಿದ ಕೆಲವು ವಸ್ತುಗಳನ್ನು ಇಲ್ಲೆಲ್ಲ ಇರಿಸಿದ್ದಾರೆ ನೋಡಿ... ನಿಮಗೆ ಅಷ್ಟೊಂದು ಆಸಕ್ತಿ ಇದ್ದಲ್ಲಿ ಇಲ್ಲಿ ಸಂಗ್ರಹಿಸಿರುವ ವಿವರಗಳನ್ನು ನಿಮಗೆ ಬೇಕಾಗುವಷ್ಟು ಮಾಹಿತಿಯನ್ನು ಒದಗಿಸಬಲ್ಲವು. ಅವರು ಬಳಸುವ ಪದಾರ್ಥ, ಆಭರಣ, ಉಡುಪು, ಉಪಕರಣ, ವಾಸಿಸುವ ಗೂಡುಗಳು, ಸಂಚರಿಸಲು ಬಳಸುವ ಮರದ ದಿಮ್ಮಿಯನ್ನು ಕೊರೆದು ಮಾಡಿದ ದೋಣಿಗಳು.. ಎಲ್ಲವೂ ಅವರ ಬಗ್ಗೆ ತಿಳಿದುಕೊಳ್ಳಬೇಕೆನ್ನುವುದೆಲ್ಲವನ್ನೂ ವಿವರಿಸುತ್ತವೆ' –ಎಂದರು.

ಇದೆಲ್ಲದರ ಅರ್ಥ ಅವರನ್ನು ಭೇಟಿಯಾಗಲು ಸಾಧ್ಯವಿಲ್ಲ ಎಂದಾಯಿತು ಒಬ್ಬರ ಮುಖ ಒಬ್ಬರು ನೋಡಿಕೊಂಡೆವು.

"ಆಯ್ತುಸಾರ್ ಇಲ್ಲಿರುವ ವಸ್ತುಗಳನ್ನು ನೋಡುತ್ತೇವೆ" – ಎಂದೆವು. " ಬೇಕಾದರೆ

ಒಳಗೆ ಒಂದು ಒಳ್ಳೆ ಲೈಬ್ರರಿ ಇದೆ. ಅಂಡಮಾನಿನ ಜನ ಜಾತಿಗಳ ಸಾಂಸ್ಕೃತಿಕ ಜೀವನ ಪರಿಚಯುವನ್ನು ನೀಡುವ ಪುಸ್ತಕಗಳು, ದಾಖಲೆಗಳು, ಭಾವ ಚಿತ್ರಗಳು, ಮಾದರಿಗಳು ಇವೆ. ಅವುಗಳನ್ನು ನೋಡಬಹುದು; ಓದಬಹುದು" ಎಂದರು.

"ಆಯ್ತು ನಾವಿನ್ನು ಇದನ್ನೆಲ್ಲ ನೋಡಿಕೊಂಡು ಹೊರಡುತ್ತೇವೆ" ಎಂದು. 'ಅಯ್ಯೋ ಈಗಲೇ ಹೊರಡುವುದೇ? ಎಷ್ಟೋ ದೂರದಿಂದ ಬಂದಿದ್ದೀರಿ. ಕಾಫಿ ತರಿಸುತ್ತೇನೆ' ಎಂದರು.

'ಬೇಡಸಾರ್, ಹುಡುಗರೆಲ್ಲ ಕಾಯುತ್ತಿರುತ್ತಾರೆ. ಆದಷ್ಟು ಬೇಗ ಅವರನ್ನು ಕೂಡಿಕೊಳ್ಳಬೇಕು' ಎಂದಳು ಲೀಲಾ.

"ಇನ್ನೂ ಎಷ್ಟು ದಿವಸ ಇರುತ್ತೀರಿ? ಒಮ್ಮೆ ನಮ್ಮ ಮನೆಗೆ ಊಟಕ್ಕೆ ಬನ್ನಿ.. ಬೆಂಗಳೂರಿಗೆ ಹೋಗಿಯಾದ ಮೇಲೆ ನನ್ನಕ್ಕನಿಗೆ ನಾನು ಕೇಳಿದೆನೆಂದು ಹೇಳಿ.. ಆದರೆ ಇವತ್ತು ರಾತ್ರಿಗೇ ಮನೆಗೆ ಬನ್ನಿ ನನಗೂ ಸಂತೋಷವಾಗುತ್ತೆ"– ಎಂದರು.

"ಊಟವೇನು ಬಿಡಿ. ನೀವು ತೋರಿದ ಪ್ರೀತಿ ಆದರಗಳು ಸಾಕು. ಊಟಕ್ಕಿಂತಲೂ ಹೆಚ್ಚು.. ನೀವೇನು ಬೆಂಗಳೂರಿಗೆ ಬರುವುದಿಲ್ಲವೇ?" ಎಂದು ಕೇಳಿದೆ.

" ಇಷ್ಟರಲ್ಲೆ ನನಗೆ ಟ್ರಾನ್ಸ್ ಫರ್ ಆಗಬಹುದು. ಇಲ್ಲಿದ್ದು ಮಾಡುವುದೇನಿದೆ?.. ಒಂದಷ್ಟು ದಿನ ಎನ್ ಜಾಯ್ ಮಾಡೋಕೇ ಸರಿ ಹೊರತಾಗಿ ಇಲ್ಲಿಯೇ ಬದುಕುವುದು ಕಷ್ಟ' ಎಂದರು.

ಅವರ ಮಾತಿನಲ್ಲಿ ಸತ್ಯವಿದೆಯೇ –ಎಂಬ ಅನುಮಾನ ಬಂತು. ಯಾಕೆಂದರೆ ನಮ್ಮ ಭಾವನೆಯಲ್ಲಿ ಇದು ಸ್ವರ್ಗ! ಆದರೆ ಅತಿ ಪರಿಚಿತವಾದರೆ ಅಸಹ್ಯಕ್ಕೆ ಬೇಸರಕ್ಕೆ ದಾರಿ ಆಗುವುದೆಂಬ ಮಾತಂತು ಸತ್ಯ. ಬಹುಶಃ ಈಗ ಅವರ ಅನುಭವಕ್ಕೆ ಅದು ಬಂದಿರಬಹುದು ಎನಿಸಿತು.

ನಾವು ಅಲ್ಲಿನ ವಸ್ತುಗಳನ್ನು, ಒಂದನ್ನೂ ಬಿಡದಂತೆ ನೋಡಿ, ಒಂದಷ್ಟು ವಿಷಯ ಸಂಗ್ರಹಣೆ ಮಾಡಿಕೊಂಡು ಅವರಿಂದ ಬೀಳ್ಕೊಂಡು ಹಾಸ್ಟೆಲಿನ ಬಂದೆವು.

ಮಧ್ಯಾಹ್ನ 2.30 ನ್ನು ದಾಟಿತ್ತು. ಹುಡುಗರೂ ಹಿಂತಿರುಗಿ ನಮಗಾಗಿ ಕಾಯುತ್ತಿದ್ದರು. ಹಸಿವಿನಿಂದ ಹೊಟ್ಟೆ ಚುರುಗುಡುತ್ತಿತ್ತು. ಸರಿ ಎಲ್ಲರೂ ಕೋಣೆಗಳಿಗೆ ಹಿಂತಿರುಗಿ ಕೈಕಾಲು ಮುಖ ತೊಳೆದುಕೊಂಡು ಊಟಕ್ಕೆಂದು 'ಅನ್ನಪೂರ್ಣ' ಹೊಟೆಲಿನೆಡೆಗೆ ನಡೆದೆವು.

ಊಟ ಮಾಡಿಕೊಂಡು ಹಿಂತಿರುಗಿದ ನಾವು ಸ್ವಲ್ಪ ರೆಸ್ಟ್ ತೆಗೆದುಕೊಂಡು ಸಂಜೆಗೆ ಸುತ್ತಾಟಕ್ಕೆ ಹೋಗೋಣವೆಂದು ತೀರ್ಮಾನಿಸಿದೆವು.

ಎಲ್ಲರೂ ದಡ ದಡ ಕೋಣೆಗಳತ್ತ ಓಡಿದರು. ಕೆಲವರು ರೆಸ್ಟ್ ಬೇಡವೆಂದು ತ್ರೋಬಾಲ್, ಟೆನಿಕಾಯಿಟ್, ಕ್ರಿಕೆಟ್ ಆಡತೊಡಗಿದರು. ಹುಡುಗಿಯರಲ್ಲಿ ಕೆಲವರು ಹಾಸ್ಟೆಲಿಗೆ ನೇರವಾಗಿ ಒಂದಿಪ್ಪತ್ತು ಮಾರು ದೂರದಲ್ಲಿದ್ದ ದಂಡೆಯಂಚಿನ ಮೇಲೆ ಕುಳಿತು

ಸಮುದ್ರದರ್ಶನದಲ್ಲಿ ಮಗ್ನರಾದರು. ಇನ್ನಿಬ್ಬರು ಡ್ಯಾಷಿಂಗ್ ಆಗಿದ್ದವರು. ಹತ್ತಿರದ ಅಬೆರ್‌ಡೀನ್ ಬಜಾರಿನಲ್ಲಿ ಅಡ್ಡಾಡಿ ಬರಲು ಅಪ್ಪಣೆ ಪಡೆದು ಹೊರಟರು.

ನನಗೆ ನಿದ್ದೆ ಬರುತ್ತಿರಲಿಲ್ಲ. ಅಂಡಮಾನಿನ ಬಗೆಗಿನ ವಿವರಗಳನ್ನು ಓರಣವಾಗಿ ಜೋಡಿಸುತ್ತಿದ್ದೆ.

## ಸಾಂಸ್ಕೃತಿಕ ಝಲಕುಗಳು : –

ಅಂಡಮಾನಿನ ಅಸ್ತಿತ್ವದ ಪರಿಚಯವಾದ್ದೇ ಪಾಶ್ಚಾತ್ಯರಿಂದ ಎಂದರೆ ತಪ್ಪಾಗಲಾರದು. ಬಂಗಾಳ ಕೊಲ್ಲಿಯಲ್ಲಿನ ಈ ದ್ವೀಪ ಸಮೂಹ 13ನೇ ಶತಮಾನದಿಂದ ಮಾರ್ಕೊಪೋಲೋ, ನಿಕೊಲೊ ಕೊಂಟಿ ಮುಂತಾದ ಸಾಹಸಿ ಪ್ರವಾಸಿಗಳಿಂದ ಜಗತ್ತಿನ ಅರಿವಿಗೆ ಬಂತು. ಪೋರ್ಚುಗೀಸರು, ಡೇನರು ವ್ಯಾಪಾರ ವ್ಯವಹಾರ ಸಂಬಂಧ ಇರಿಸಿಕೊಂಡಿದ್ದರು. ಕ್ರೈಸ್ತ, ಮಿಷನರಿಗಳಿಗೂ ಮೊದಲು ಪೋರ್ಚುಗೀಸ ಮಿಷನರಿಗಳು ಕ್ರೈಸ್ತ ಮತ ಪ್ರಚಾರ ಕಾರ್ಯ ಕೈಗೊಂಡಿದ್ದರು. ಇಂದಿಗೂ ನಿಕೊಬಾರಿನ ಜನ ಸಂಸ್ಕೃತಿಯಲ್ಲಿ ಕ್ರೈಸ್ತ ಮತದ ದಟ್ಟ ಪ್ರಭಾವ ಕಾಣಿಸಿಕೊಳ್ಳುತ್ತಿದೆ. ನಂತರ 17, 18, ನೇ ಶತಮಾನದಲ್ಲಿ ಯುರೋಪೀಯ ಸಮುದ್ರ ಸಾಹಸಿಗಳು, ಮಿಷನರಿಗಳು ಈ ದ್ವೀಪಕ್ಕೆ ಭೇಟಿ ನೀಡಿದರು. ಡೇನರು, ಪೋರ್ಚುಗೀಸರಲ್ಲದೆ ಆಸ್ಟ್ರಿಯನ್ನರು, ಪ್ರಷಿಯನರು, ಫ್ರೆಂಚರೂ ಕೂಡಾ ಸಾಹಸಯಾತ್ರೆ ಮಾಡಿ ಇಲ್ಲಿಗೆ ಬಂದಿದ್ದರಾದರೂ ಇದನ್ನು ಯಾರಿಗೂ ವಶಪಡಿಸಿಕೊಳ್ಳಲಾಗಲಿಲ್ಲ.

19ನೇ ಶತಮಾನದ ಮಧ್ಯ ಭಾಗದಲ್ಲಿ ಕಡೆಯದಾಗಿ ಬ್ರಿಟಿಷರು ವಶಪಡಿಸಿಕೊಳ್ಳುವಲ್ಲಿ ಸಫಲರಾದರು. ಅಷ್ಟೇ ಅಲ್ಲ, ಅಲ್ಲಿ ವಸಾಹತೀಕರಣ ಆರಂಭಿಸಿ, ಬ್ರಿಟಿಷ್ ಸೆಟಲ್‌ಮೆಂಟ್ ಗಳನ್ನು ಸ್ಥಾಪಿಸಿದರು. ಈಗಿನ ಪೋರ್ಟ್‌ಬ್ಲೇರೇ ಆ ಸ್ಥಾವರವಾಯಿತು. ಬ್ರಿಟಿಷ್ ಸೇನೆಯನ್ನು ಇಲ್ಲಿನ ಮೂಲ ನಿವಾಸಿಗಳು ಹೊಡೆದೋಡಿಸಿದರು. ಬ್ರಿಟಿಷರು ಅಲ್ಲಿ ನೆಲೆಸುವುದು ದುಸ್ಸಾಧ್ಯವೆನಿಸಿ ಬೇರೆ ಉಪಾಯಗಳತ್ತ ಯೋಚಿಸಿದರು. ಹೇಗಿದ್ದರೂ ಭಾರತವನ್ನು ಆಳುತ್ತಿದ್ದ ಅವರಿಗೆ ಈ ಅಂಡಮಾನ್ ನಿಕೋಬಾರ್‌ಗಳು ಯಾವುದಕ್ಕೂ ಪ್ರಯೋಜನಕ್ಕೆ ಬಾರದಿದ್ದರೂ ಪೀನಲ್ ಸೆಟಲ್ ಮೆಂಟ್ (ದಂಡ ಕೇಂದ್ರ) ಆಗಿ ರೂಪಾಂತರಿಸುವ ಆಲೋಚನೆ ಹೊಳೆಯಿತು.

ಪರಿಣಾಮವಾಗಿ, 1857 ರಲ್ಲಿ ಬ್ರಿಟಿಷ್ ಸರ್ಕಾರದ ವಿರುದ್ಧ ಆದ ದಂಗೆಯಲ್ಲಿ ಸೆರೆಯಾದ 200 ಮಂದಿ ಸೆರೆಯಾಳುಗಳನ್ನು ಈ ದಂಡ ಕೇಂದ್ರಕ್ಕೆ ಕಳಿಸಲಾಯಿತು. ನಂತರ ಇನ್ನಷ್ಟು ಮಂದಿ ಸೆರೆಯಾಳು ಸೇರೆ ಒಟ್ಟು 773 ಸೆರೆಯಾಳುಗಳನ್ನು ಇಲ್ಲಿಗೆ ಕರೆತಂದು ಸ್ಥಾಪಿಸಿದರು.

ಸೆರಯಾಗಿದ್ದವರಲ್ಲಿ ದೂಧ್ ನಾಥ್ ಎಂಬುವನು ತಪ್ಪಸಿಕೊಂಡು ಹೋಗಿ ಅಲ್ಲಿನ ಗುಡ್ಡಗಾಡಿನ ಜನರೊಂದಿಗೆ ಇದ್ದು ಅವರಿಗೆ ದ್ರೋಹ ಬಗೆದು ಅವರ ವಿರುದ್ಧ ಬ್ರಿಟಿಷರೊಂದಿಗೆ

ಕೈ ಮಿಲಾಯಿಸಿದ. ಅಬೆರ್ ಡೀನ್ ಸಮರ ಬ್ರಿಟಿಷರ ಮತ್ತು ಮೂಲ ನಿವಾಸಿಗಳ ನಡುವೆ ನಡೆಯಿತು.

ಈ ಯುದ್ಧ ನಡೆದ ನಂತರ ಅಧಿಕಾರ ವಹಿಸಿಕೊಂಡ ಹಾಟನ್‌ನ ಧೋರಣೆಗಳು ಮೊದಲಿದ್ದ ವಾಕರ್‌ಗಿಂತ ಬೇರೆಯಾಗಿದ್ದವು. ಈ ಮಾನವೀಯ ದೃಷ್ಟಿಯನ್ನು ಹೊಂದಿದ್ದ ಕಾರಣಕ್ಕಾಗಿ ಇಲ್ಲಿದ್ದ ಸೆರೆಯಾಳುಗಳ ಪರಿಸ್ಥಿತಿಯ ಸುಧಾರಣೆಗೆ ಯತ್ನಿಸಿದ.

ಮುಂದೆ ಸೆರೆಯಾಳುಗಳನ್ನು ಕೃಷಿಯ ಕೆಲಸಕ್ಕೆ ಹಚ್ಚಿದರು. ಅಂಡಮಾನೀಯರ ಜೊತೆಯ ಸಂಬಂಧದಲ್ಲಿ ಸುಧಾರಣೆಯ ಪ್ರಯತ್ನವಾಯಿತು. ಸೆರೆಯಾಳುಗಳನ್ನು ಮುಕ್ತವಾಗಿ ಬಿಟ್ಟು ಅಲ್ಲಿಯೇ ನೆಲೆಸಲು ಆದೇಶವಾಯಿತು. ಇಚ್ಛೆಪಟ್ಟಲ್ಲಿ ತಮ್ಮ ಕುಟುಂಬಗಳನ್ನೂ ಕರೆತರಬಹುದಾಗಿತ್ತು. ಅವರ ಅರೋಗ್ಯ, ಆರ್ಥಿಕ ಪರಿಸ್ಥಿತಿಯ ಬಗ್ಗೆ ಗಮನ ಕೊಡಲಾಯಿತು.

1896ರಲ್ಲಿ ಸೆಲ್ಯುಲಾರ್ ಜೈಲಿಗೆ ಕಟ್ಟಡ ನಿರ್ಮಾಣವಾಯಿತು. ಆದರೆ ಪೀನಲ್ ಸೆಟಲ್‌ಮೆಂಟ್ ಸ್ಕಿಮು ಮತ್ತು ಕನಿಷ್ಠ ಹತ್ತು ವರುಷಗಳ ಸೆರೆವಾಸವೆಂಬ ನಿಯಮಗಳು ರದ್ದಾದವು. ಕೆಲವು ತಿಂಗಳುಗಳ ಸೆರೆವಾಸದ ನಂತರ ದಿನಗೂಲಿಯ ಮೇಲೆ ಸೆರೆಯಾಳುಗಳನ್ನು ಕೆಲಸಗಳಲ್ಲಿ ತೊಡಗಿಸುತ್ತಿದ್ದರು. ಖೈದಿಗಳ ಉಡುಪನ್ನು ಕಡ್ಡಾಯವಾಗಿ ಧರಿಸಬೇಕೆಂಬ ನಿಯಮವನ್ನೂ ರದ್ದುಗೊಳಿಸಿದರು.

2ನೇ ಜಾಗತಿಕ ಯುದ್ಧದ ಸಮಯದಲ್ಲಿ ಅಂಡಮಾನ್ ಜಪಾನೀಯರ ವಶವಾಯಿತು. ಸ್ಥಳೀಯರೊಂದಿಗೆ ಜಪಾನೀಯರು ಸ್ನೇಹದೊಂದಿಗೆ ಇದ್ದರು. ಆದರೆ ಬ್ರಿಟಿಷ್‌ರೊಂದಿಗಿನ ಸಂಬಂಧದ ವಿಚಾರ ಅನುಮಾನಾಸ್ಪದವಾಗಿ ಇದ್ದುದರಿಂದ ಮುಗ್ಧರೂ ನಿರಪರಾದಿಗಳೂ ಆದವರು ಎಷ್ಟೋ ಮಂದಿ ಜಪಾನೀಯರಿಂದ ಹತರಾದರು. ಜಪಾನೀಯರು ಅಂಡಮಾನನ್ನು ಆರ್ಥಿಕವಾಗಿ ಅಭಿವೃದ್ಧಿಗೊಳಿಸಿದರು. ಸ್ಥಳೀಯರನ್ನು ಕೃಷಿಯ ಕೆಲಸಕ್ಕೆ ಹಚ್ಚಿದರು. ರಸ್ತೆಗಳನ್ನು ನಿರ್ಮಿಸಿದರು. ಆದರೆ 1945 ರಲ್ಲಿ ಸೋಲನ್ನು ಅನುಭವಿಸಿದರು.

1947 ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದು ವಿಧಿ ನಿಯಮಗಳು ಬದಲಾದವು. ಈ ದ್ವೀಪ ನೇರವಾಗಿ ಚೀಫ್ ಕಮೀಷನರ್ ಅವರ ಆಡಳಿತ ವ್ಯಾಪ್ತಿಗೆ ಒಳಪಟ್ಟಿತು. ಈ ಕಮೀಷರ್‌ರನ್ನು 1982 ಭಾರತ ಸಂವಿದಾನದ ಅಧ್ಯಕ್ಷರೇ ನೇರವಾಗಿ ನಾಮಕರಣ ಮಾಡಿದರು. ಈ ಪದವಿಯನ್ನು ಲೆಫ್ಟಿನೆಂಟ್ ಗವರ್ನರ್ ಹುದ್ದೆಗೆ ಏರಿಸಲಾಯಿತು.

ಅಂಡಮಾನಿನಲ್ಲಿ ಪ್ರಮುಖವಾಗಿ ಎರಡು ಸಾಂಸ್ಕೃತಿಕ ಕವಲುಗಳನ್ನು ಕಾಣುತ್ತೇವೆ. ಒಂದು ನೆಗ್ರಿಟೋ ಸಂಸ್ಕೃತಿ ಮತ್ತೊಂದು ಮಂಗೋಲಯ್ಡ್ ನಿಕೋಬಾರಿಗಳು ಮತ್ತು ಶೋಂಪೆನರು.

ಗ್ರೇಟ್ ಅಂಡಮಾನಿನ ಓಂಗೆ, ಜಾರವಾ, ಸೆಂಟಿನೆಲಿ ಸಂಸ್ಕೃತಿ ಮತ್ತು ನಿಕೋಬಾರಿ (ಶೋಂಪೆನರು) ಸಂಸ್ಕೃತಿ.

ಇವೆರಡೂ ಸ್ಥಳೀಯ ಜನಂಗೀಯ ಸಂಸ್ಕೃತಿಗಳಾಗಿವೆ. ಬ್ರಿಟಿಷರು ಬರುವುದಕ್ಕೆ

ಮೊದಲು ಮತ್ತು ನಂತರವೂ ಇವೆರಡೂ ಸಂಸ್ಕೃತಿಗಳು ತಮ್ಮ ತನವನ್ನು ಕಾಪಾಡಿಕೊಂಡು ಬಂದಿವೆ. ಕಟ್ಟಾ ಬುಡಕಟ್ಟಿನ ಸಂಸ್ಕೃತಿಯ ಓಂಗೆ, ಜಾರವಾ, ಸೆಂಟಿನೆಲಿಗಳು ಮೂಲತಃ ಬೇಟೆಗಾರರು.

ಈ ದ್ವೀಪದ ನೆಗ್ರಿ ಟೋವರ್ಗದ 4 ಗುಂಪುಗಳಲ್ಲಿ ಓಂಗೆಗಳ ಮೂಲಕ ಕಥೆ ಬಹಳ ರೋಚಕವಾಗಿದೆ. ಅವರದೇ ಆದ ಪುರಾಣ ಕಲ್ಪನೆಯಲ್ಲಿ ಯುವ ದಂಪತಿಗಳು ಬೇಟೆಗೆಂದು ಹೋಗುವುದಕ್ಕೆ ಮೊದಲು 'ಟೂಕ್ವೆ ಜೆಲಾಕೊ' ಮರದ ಕೆಲವು ಸಸಿಗಳನ್ನು ನೆಟ್ಟಿದ್ದರಂತೆ. ಅವರು ಹಿಂತಿರುಗಿ ಬಂದು ನೋಡುವಷ್ಟರಲ್ಲಿ ಜೋಡಿ ಜೋಡಿ ಸಸಿಗಳೆಲ್ಲ ಒಂದು ಹೆಣ್ಣು, ಒಂದು ಗಂಡಾಗಿ ರೂಪಾಂತರ ಹೊಂದಿ ಮದುವೆಯಾಗಿ ಅಸಂಖ್ಯ ಮಕ್ಕಳಿಗೆ ಜನ್ಮವಿತ್ತರಂತೆ!! ಇವರೇ ಮುಂದೆ ಓಂಗೆ ಬುಡಕಟ್ಟಿನವರಾಗಿ ಇಲ್ಲಿ ನಡೆಸಿದರಂತೆ. ಈಗ ಇವರ ಸಂಖ್ಯೆ 100 ಕ್ಕಿಂತ ಹೆಚ್ಚಿಗೆ ಇಲ್ಲ. ಇವರ ಪುನರ್ವಸತಿಗೆ ಸಕಾರ ಹಲವು ಕ್ರಮಗಳನ್ನು ಕೈಗೊಂಡಿದೆ. ಇವರಿಗೆ ಇವರದೇ ಆದ ಬುಡಕ್ಕಟಿನ ಭಾಷೆ ಇದೆ. ಲಿಪಿ ಇಲ್ಲ. ಹೊರಗಿನ ಜನರ ಜೊತೆಯ ಸಂಪರ್ಕದಿಂದ ಕೆಲವು ಓಂಗೆಗಳು ಹಿಂದಿಯನ್ನೂ ಮಾತನಾಡುತ್ತಾರೆ. ಗಂಡಾಗಲಿ, ಹೆಣ್ಣಾಗಲಿ ಮೈತುಂಬಾ ಬಣ್ಣದ ಚಿತ್ರಗಳನ್ನು, ಬರೆಸಿಕೊಂಡಿರುತ್ತಾರೆ. ಅದೇ ಅವರ ದೇಹ ಮುಚ್ಚುವ ಉಡುಪು. ಗುಪ್ತಾಂಗಗಳನ್ನು ಮರದ ಎಲೆಗಳಿಂದ, ನಾರಿನಿಂದ ಮುಚ್ಚಿಕೊಂಡಿರುತ್ತಾರೆ. ಮುಖ  ಮತ್ತು ಮೈಗೆ ಒಂದು ಬಗೆಯ ಬಿಳಿಯಾದ ಅಂಟು ಮಣ್ಣನ್ನು ಮೆತ್ತಿಕೊಂಡಿರುತ್ತಾರೆ. ಕೆಲವು ಸಲ ಕೆಂಪು ಮಣ್ಣು ! ಬಳಿದುಕೊಂಡ ಈ ಮಣ್ಣಿನ ಮೇಲೆ ಉಗುರುಗಳಿಂದ ಇಲ್ಲವೆ ಯಾವುದಾದರೂ ಉಪಕರಣದಿಂದ ರೇಖಾ ವಿನ್ಯಾಸಗಳನ್ನು ಬಿಡಿಸಿರುತ್ತಾರೆ. ಕಪ್ಪು ಕುಳ್ಳದ ಶರೀರ. ಹಿಂಭಾರ ಹೆಚ್ಚು. ಬೇಟೆಯಾಡಿದ ಪ್ರಾಣಿಗಳ ಮಾಂಸ, ನಾರು, ಬೇರು, ಕಂದಮೂಲ ಆಹಾರ.

ಜೊತೆಗೆ ಆಮೆ, ಏಡಿ, ಮೀನುಗಳೂ ಕೂಡ ಅವರ ಆಹಾರವಾಗಿದೆ. ಇತ್ತೀಚೆಗೆ ಪುನರ್ವಸತಿ ಯೋಜನೆಯ ಅಡಿಯಲ್ಲಿ ಮುಫತ್ತಾಗಿ ಅಕ್ಕಿ, ಗೋಧಿಹಿಟ್ಟು, ಬೇಳೆ, ಅಡಿಗೆ ಎಣ್ಣೆ, ಉಪ್ಪು, ಹಾಲಿನ ಪುಡಿ, ಈರುಳ್ಳಿ ಮುಂತಾದ ಸಾಮಾಗ್ರಿಗಳನ್ನು ಒದಗಿಸಲಾಗುತ್ತಿದೆ.

ಎಲೆ ಅಡಿಕೆ, ಹೊಗೆಸೊಪ್ಪಿನ ರುಚಿಗೂ ಬಿದ್ದಿದ್ದಾರೆ.  ಮೊದಲು ಜೇನುಗೂಡಿನಾಕಾರದ ಸಮುದಾಯ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಒಂದು ಗುಂಪಿನ ಎಲ್ಲ ಸದಸ್ಯರೂ ಒಟ್ಟಿಗೆ ಸಾಮೂಹಿಕವಾಗಿ ವಾಸಿಸುತ್ತಿದ್ದರು. ಹೀಗೆ ವಾಸಿಸುವ ಗುಂಪಿನಲ್ಲಿ ತಂದೆ – ತಾಯಿ, ಅಕ್ಕ –ತಂಗಿ, ಅಣ್ಣ –ತಮ್ಮ ಮತ್ತು ಅವರ ಮಕ್ಕಳು. ಓಂಗೆಗಳು ತಮ್ಮ ಗುಂಪಿನೊಳಗೇ ಮದುವೆಯಾಗುತ್ತಾರೆ. ಮದುವೆ ವಯಸ್ಸು ಮುಖ್ಯವಲ್ಲ. ಶಾಂತಿ ಪ್ರಿಯರಾಗಿ ಬಾಳುತ್ತಾರೆ. ತಾಯ್ತನದ ತುಡಿತ ಹೆಚ್ಚು. ತುಂಬು ಬಸಿರಿಯರು ಕಾಡಿನೊಳಗೆ ಪ್ರವೇಶಿಸಬಾರದೆಂಬ ಕಟ್ಟಳೆ. ದುಷ್ಟ ಶಕ್ತಿಗಳ ಪ್ರಭಾವ ಬೀಳದಿರಲೇಂಬುದೇ ಈ ಕಟ್ಟಳೆಯ ಹಿಂದಿನ ಕಾಳಜಿ. ಅವರ ನಂಬಿಕೆಯಂತೆ 'ಓಂಕೋ ಚಾಕ್ವೆ' ಆತ್ಮ ಲಿಟಲ್ ಅಂಡಮಾನಿನ ಆಕಾಶದಲ್ಲಿ ಇರುವುದು, ಹಂದಿಮಾಂಸ ಜೇನು, ಆಮೆ ಇತ್ಯಾದಿ ಆಹಾರ ಪದಾರ್ಥಗಳ ಮೂಲಕ ಬಸಿರಿ ಹೆಂಗಸಿನ ಗರ್ಭ ಸೇರುತ್ತದೆ. ಈ ಆತ್ಮವೇ ಮಗುವಿನ ಆತ್ಮವಾಗುತ್ತದೆ! ಪ್ರಸೂತಿಗೆಂದೇ

ನಿರ್ಮಿಸಿದ ಕೊರೇಲ್ ಎಂಬ ಗುಡಿಸಲಲ್ಲಿ ಮಗುವಿನ ಜನನವಾಗುತ್ತದೆ. ಬಾಣಂತಿಯ ಗರ್ಭಕೋಶದ ಬಗ್ಗೆ, ಆಹಾರದ ಬಗ್ಗೆ ಬಹಳ ಮುತುವರ್ಜಿ ವಹಿಸಲಾಗುತ್ತದೆ. ಮದುವೆ, ಸೀಮಂತ, ನಾಮಕರಣ ಇತ್ಯಾದಿ ವಿಧಿಗಳೆಲ್ಲವೂ ಬುಡಕಟ್ಟಿನ ಸಮಾಜದಲ್ಲಿ ಪ್ರಚಲಿತ ಪದ್ಧತಿಯಂತೆಯೇ ನಡೆಯುತ್ತದೆ.

ಇದೇ ರೀತಿ ಅಂಡಮಾನಿನ ಇನ್ನಿತರ ಬುಡಕಟ್ಟಿನ ಜನವೆಂದರೆ ಜಾರವಾಗಳು. ಸೆಂಟಿನೆಲಿಗಳು ಮತ್ತು ಶೋಂಪೆನರು. ಸೆಂಟನೆಲಿಗಳೇ ಅತ್ಯಂತ ಆದಿವಾಸಿಗಳು. ಲಿಟಲ್ ಅಂಡಮಾನಿನಲ್ಲಿದ್ದವರು ಚಂಡಮಾರುತದಿಂದಾಗಿ ಕೊಚ್ಚಿಹೋದರು. ಸೆಂಟಿನಲಿ ಭಾಷೆಯೊಂದನ್ನು ಬಿಟ್ಟರೆ ಬೇರೆ ಭಾಷೆಗಳ ಪರಿಚಯವಿಲ್ಲ. ಗಂಡಸರು, ಹೆಂಗಸರು ಪೂರ್ಣ ಬೆತ್ತಲೆ ಇರುತ್ತಾರೆ. ಎಲೆ ಮತ್ತು ಮರದ ತೊಗಟೆಯಿಂದ ಮಾಡಿದ ಆಭರಣಗಳು ಮತ್ತು ತಲೆಗೆ ಮುಂಡಾಸಿನಂತೆ ಒಂದು ತೊಗಟ್ಟೆ ತುಂಡನ್ನು ಸುತ್ತಿಕೊಂಡಿರುತ್ತಾರೆ. ನಿಗ್ರೋ ಜನಾಂಗದ ಎಲ್ಲ ಲಕ್ಷಣಗಳನ್ನೂ ಹೊಂದಿದ್ದಾರೆ. ಗುಂಗುರು ಗುಂಗುರು ಕೂದಲು. ಕಪ್ಪು ಬಣ್ಣದ ಜನ, ಮಧ್ಯಮ ಗಾತ್ರದ ಎತ್ತರ. ಮಾಂಸ, ಕಾಡುಕೋಣ, ಆಮೆ, ಮೀನು, ಸಿಗಡಿ, ತೆಂಗಿನಕಾಯಿ, ಬಾಳೆ ಹಣ್ಣು ಅವರ ಆಹಾರ. ಆಹಾರದ ಹುಡುಕಾಟದಲ್ಲಿ ಅಲೆದಾಡುವ ಜನ. ಬೇರೆ ಬೇರೆ ಬುಡಕಟ್ಟಿನ ಜನಕ್ಕಿಂತ ಹೆಚ್ಚಾಗಿ ಜನಸಂಪರ್ಕದಿಂದ ದೂರವಿರುತ್ತಾರೆ. ಅನ್ಯರ ಜೊತೆ ಬೆರೆಯಲು ದ್ವೇಷಿಸುತ್ತಾರೆ. ಟೊಳ್ಳೆನಿಸಿದ ಮರದ ದಿಮ್ಮಿಗಳಿಂದ ದೋಣಿಗಳನ್ನು ನಿರ್ಮಿಸಿಕೊಂಡು ಮೀನು ಹಿಡಿಯಲು ಹೊರಡುತ್ತಾರೆ. ಹೊರ ಜನಾಂಗಗಳೊಡನೆ ಬೆರೆಯುವುದದೇ ಇಲ್ಲ. ಒಂದು ಸಣ್ಣ ಗುಂಪಾಗಿದ್ದೂ ಅಂಡಮಾನನ್ನು ಶತ್ರುಗಳಿಂದ ಉಳಿಸಿಕೊಂಡು ಬಂದಿದ್ದಾರೆ. ಸಮುದ್ರದಲ್ಲಿ ಹೊರಗಿನವರು ಯಾರೇ ಕಾಣಿಸಲಿ ತಮ್ಮ ತೀಕ್ಷ್ಣವಾದ ವಿಷಪೂರಿತ ಬಾಣಗಳಿಂದ ಹೊಡೆದು ಅಟ್ಟಿಬಿಡುತ್ತಾರೆ. ಇರುವುದರಲ್ಲಿ ಈ ಸೆಂಟಿನೆಲಿಗಳೇ ಮೂಲನಿವಾಸಿ ಜನಾಂಗದ ಕಟ್ಟ ಕಡೆಯ ಅವಶೇಷ. ಅವರನ್ನು ಅಂಡಮಾನಿನ ಮುಖ್ಯ ಪ್ರವಾಹದೊಳಕ್ಕೆ ಸೆಳೆದುಕೊಳ್ಳುವ ಹಲವು ಪ್ರಯತ್ನಗಳು ನಡೆಯುತ್ತಿವೆಯಾದರೂ ಇವರು ಮಾತ್ರ ಸೊಪ್ಪು ಹಾಕಿದಂತಿಲ್ಲ.

ಇನ್ನೊಂದು ಬುಡಕಟ್ಟಿನವರೆಂದರೆ ಶೋಂಪೆನರು. ಅಂಡಮಾನ್ ನಿಕೋಬಾರ್ ದ್ವೀಪ ಸಮೂಹಗಳಲ್ಲಿ ಅರೆ ಅಲೆಮಾರಿ ಜನಾಂಗ ಇದಾಗಿದೆ. ದಟ್ಟ ಕಾಡಿನೊಳಗೆ ವಾಸಿಸುವ ಇವರು ಮಾತನಾಡುವ ಭಾಷೆಗೆ ಹಲವು ಉಪಭಾಷೆಗಳಿವೆ. ಆದರೆ ಒಂದು ಉಪ ಭಾಷೆಯನ್ನಾಡುವವರಿಗೆ ಮತ್ತೊಂದು ಉಪ ಭಾಷೆ ಅರ್ಥವಾಗುವುದಿಲ್ಲ. ಪುಟ್ಟ ಪುಟ್ಟ ಸಂಸಾರಗಳು. ಗಂಡ- ಹೆಂಡತಿ-ಮಕ್ಕಳು ಸೇರಿ ಒಂದು ಕುಟುಂಬ. ಪುರುಷನೇ ಕುಟುಂಬದ ಯಜಮಾನ. ಬಸಿರು, ಬಾಣಂತಿ, ನಾಮಕರಣ, ಮದುವೆ ಇತ್ಯಾದಿ ಸಂದರ್ಭಗಳಲ್ಲಿ ವಿಶೇಷ ವಿಧಿ ಆಚರಣೆಗಳಿವೆ.

ಏಕಪತ್ನಿತ್ವವೇ ಸಾಮಾನ್ಯ ನಿಯಮವಾದರೂ ಬಹು ಪತ್ನಿತ್ವಕ್ಕೆ ಅವಕಾಶವಿದೆ. ಮದುವೆಯ ಹೊಣೆ ತಂದೆ, ತಾಯಿಗಳ ಮೇಲಿದ್ದರೂ ಮದುವೆಯಾಗಬೇಕಾಗಿರುವ ಹೆಣ್ಣು - ಗಂಡಿನ ಒಪ್ಪಿಗೆ ಪಡೆಯಲಾಗುತ್ತದೆ. ಮರಣಾ ನಂತರ ಅಂತಿಮ ಸಂಸ್ಕಾರಗಳನ್ನು ದೀರ್ಘಕಾಲ ಆಚರಿಸಲಾಗುತ್ತದೆ.

ಆಹಾರವನ್ನು ಹುಡುಕಿಕೊಂಡು ಅಲೆದಾಡುವ ಈ ಜನ ಬೇಟೆ, ಮೀನು ಹಿಡಿಯುವಿಕೆ, ತೋಟಗಾರಿಕೆ –ಇತ್ಯಾದಿಗಳಲ್ಲಿಯೂ ತೊಡಗಿಸಿಕೊಳ್ಳುತ್ತಾರೆ. ತೀರ ಪ್ರದೇಶದ ನಿಕೋಬಾರಿಗಳ ಜೊತೆ ವ್ಯಾಪಾರ ವಿನಿಮಯ ಮಾಡಿಕೊಳ್ಳುತ್ತಾರೆ. ಅವರ ಹೆಚ್ಚಿನ ಸಂಪರ್ಕವಿರುವುದು ನಿಕೋಬಾರಿಗಳ ಜತೆ. ಆದರೂ ಈ ಸಂಪರ್ಕದಿಂದ ಅವರಲ್ಲಿ ಯಾವುದೇ ಬದಲಾವಣೆ ಆಗಿಲ್ಲ. ಅಂಡಮಾನಿನಲ್ಲಿ ಸರ್ಕಾರ ಈ ಬುಡಕಟ್ಟಿನ ಜನರ ಕ್ಷೇಮಾಭಿವೃದ್ಧಿಗೆ ಹಲವು ಯೋಜನೆಗಳನ್ನು ರೂಪಿಸಿದೆ. ಆಶ್ರಮದ ಮಾದರಿಯಲ್ಲಿ ಒಂದು ಶಾಲೆಯನ್ನು ತೆರೆದಿದ್ದಾರೆ. ಶೋಂಪೆನರ ಆರೋಗ್ಯ ತಪಾಸಣೆಗಾಗಿ ಒಂದು ಗುಡಿಸಲು ಸಂಕೀರ್ಣವಿದ್ದು ವೈದ್ಯರೊಬ್ಬರು ಆಗಾಗ ಅಲ್ಲಿಗೆ ಭೇಟಿ ನೀಡುತ್ತಾರೆ.

ಈ ಮೂಲ ನಿವಾಸಿ ಜನಾಂಗಗಳಲ್ಲದೆ ಅಂಡಮಾನಿನಲ್ಲಿರುವ ಇತರೆ ಜನಾಂಗಗಳು ಬಂಗಾಲ, ಒರಿಸ್ಸಾ, ಅಸ್ಸಾಂ, ತಮಿಳುನಾಡು, ಆಂಧ್ರ ಮುಂತಾದ ಪ್ರದೇಶಗಳಿಂದ ಬಂದು ನೆಲೆಸಿದವರಾಗಿದ್ದಾರೆ. ಇವರೇ ಅಂಡಮಾನಿನ ಜನಸಂಖ್ಯೆಯ ಪ್ರಮುಖ ಭಾಗ. ಅಂಡಮಾನ ಒಂದು ಪುಟ್ಟ ಭಾರತದಂತೆ. ಹಲವು ಜಾತಿ, ಧರ್ಮಗಳ ಜನರು ತಮ್ಮ ತಮ್ಮ ವೈಯಕ್ತಿಕತೆಯನ್ನು ಉಳಿಸಿಕೊಂಡೇ ಒಟ್ಟಾಗಿ, ಸಾಮರಸ್ಯದೊಂದಿಗೆ ಸಹಬಾಳ್ವೆ ಮಾಡುತ್ತಿದ್ದಾರೆ. ಇಲ್ಲಿ ಒಂದು ಜಾತಿ. ಒಂದು ಧರ್ಮ ಮುಖ್ಯವಲ್ಲ. ಎಲ್ಲರೂ ಎಲ್ಲ ಜಾತಿ, ಧರ್ಮ ಸಂಬಂಧವಾದ ಹಬ್ಬಗಳನ್ನು, ಉತ್ಸವಗಳನ್ನು ಆಚರಿಸುತ್ತಾರೆ. ಮೊದಮೊದಲಿಗೆ ನೆಲೆಸಿದವರು ರಾಜಕೀಯ ಕೈದಿಗಳು ಮತ್ತು ಅವರ ಕುಟುಂಬದವರು. ಭಾರತದ ಸ್ವಾತಂತ್ರ್ಯ ನಂತರ ಬೇರೆ ಬೇರೆ ಪ್ರಾಂತಗಳಿಂದ, ದೇಶದ ಭಿನ್ನ ಭಿನ್ನ ಭಾಗಗಳಿಂದ ಜನ ವಲಸೆ ಬಂದರು. ಪೂರ್ವ ಪಾಕಿಸ್ತಾನ, ಕೇರಳ, ತಮಿಳುನಾಡುಗಳಿಂದ ಬಂದವರ ಸಂಖ್ಯೆಯು ಮುಂದೆ ಸ್ಥಳೀಯ ಬುಡಕಟ್ಟಿನ ಜನರು ಅಲ್ಪ ಸಂಖ್ಯಾತರಾದರು. ಬೇರೆ ಬೇರೆ ಭಾಷಾವಾರು ಪ್ರಾಂತಗಳಿಂದ ಬಂದ ಜನ ಜಾತಿಗಳಾದ್ದರಿಂದ ಇಲ್ಲಿ ಹಲವು ಭಾಷೆಗಳು ಪ್ರಚಲಿತವಾಗಿವೆ. ತೆಲುಗು, ಕನ್ನಡ, ತಮಿಳು, ಮಲೆಯಾಳಂ, ಬಂಗಾಲಿ, ಹಿಂದಿ ಇತ್ಯಾದಿ ಭಾಷೆಗಳನ್ನು ಮಾತಾಡುತ್ತಾರಾದರೂ ಅಂಡಮಾನಿನಲ್ಲಿ ಹಿಂದಿಯೇ ವ್ಯವಹಾರ ಭಾಷೆ. ಸಾಂಸ್ಕೃತಿಕ ನೆಲೆಗಳೂ ವೈವಿಧ್ಯಮಯ. ಆದರೂ ವೈವಿಧ್ಯತೆ ಮತ್ತು ಭಿನ್ನತೆಗಳಲ್ಲಿಯೇ ಏಕತೆ ಮತ್ತು ಸಮನ್ವಯತೆಯನ್ನು ಇಲ್ಲಿ ಕಾಣುವಷ್ಟು ಬೇರೆಯಲ್ಲಿಯೂ ಕಾಣುವುದಿಲ್ಲ.

ವಲಸೆ ಬಂದ ಜನ ಜಾತಿಗಳು ತಮ್ಮ ತಮ್ಮದೇ ಆದ ಸಾಂಸ್ಕೃತಿಕ ವೈವಿಧ್ಯತೆ ಮತ್ತು ವಿಶಿಷ್ಟತೆಗಳನ್ನು ತಂದರು. ಜಾತಿ ಭೇದಗಳಿಲ್ಲದೆ ಮತ ಭೇದಗಳಿಲ್ಲದೆ ಎಲ್ಲ ಧರ್ಮ ಸಂಬಂಧವಾದ ದೀಪಾವಳಿ, ಫಾಗನಿ, ಕ್ರಿಸ್ಮಸ್, ಮೊಹರಂ – ಹೀಗೆ ಎಲ್ಲವನ್ನೂ ಸಮಾನ ಉತ್ಸಾಹ, ಶ್ರದ್ಧೆ, ಸಂಭ್ರಮಗಳಿಂದ ಆಚರಿಸುತ್ತಾರೆ.

ವಸಾಹತುಶಾಹಿ ಸ್ಥಾಪನೆಗೆ ಮೊದಲು ನಿಸರ್ಗ ಪೂಜಕರಾಗಿದ್ದರು ಇಲ್ಲಿನ ಮೂಲ ನಿವಾಸಿಗಳು. ವಲಸೆ ಬಂದವರಲ್ಲಿ ಹೆಚ್ಚಿನ ಸಂಖ್ಯೆಯು ಹಿಂದುಗಳು, ವೈಷ್ಣವರು, ಶೈವರು ಮುಂತಾದ ಪಂಥದವರಿದ್ದಾರೆ. ಹಿಂದು–ಮುಸ್ಲಿಂ– ಕ್ರಿಶ್ಚಿಯನ್‌ರ ನಡುವೆ ಎಲ್ಲೂ ಕಾಣದಂತಹ ಸೌಹಾರ್ದತೆ ಮತ್ತು ಮತ ಸಹಿಷ್ಣುತೆಯ ಮನೋಭಾವಗಳನ್ನು ಕಾಣುತ್ತೇವೆ.

**ಆರ್ಥಿಕ ಪರಿಸ್ಥಿತಿ : –**

ಬ್ರಿಟಿಷರು ಬರುವುದಕ್ಕೆ ಮೊದಲು ಇಲ್ಲಿನ ಮೂಲ ನಿವಾಸಿಗಳಾದ ಬುಡಕಟ್ಟಿನ ಜನ ಜಾತಿಗಳು ಬೇಟೆ ಮತ್ತು ಅಲೆದಾಟದ ಮೂಲಕ ಆಹಾರ ಶೇಖರಣೆ ಮಾಡುತ್ತಿದ್ದರು. ಈಗ ತೋಟಗಾರಿಕೆ, ಕೃಷಿಗಳಲ್ಲಿ ಕೆಲವರು ತೊಡಗಿದ್ದಾರೆ. ಸರಕಾರ ಇವರ ಆರ್ಥಿಕ ಪರಿಸ್ಥಿತಿ. ಜೀವನ ಸಂಕ್ಷೇಮಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಸಹಕಾರಿ ಚಳುವಳಿ ಇಲ್ಲಿ (ಅಂಡಮಾನ್ ಮತ್ತು ನಿಕೋಬಾರಿನಲ್ಲಿ) ಸಾಕಷ್ಟು ಜನಪ್ರಿಯವಾಗಿದೆ. ಹೈನುಗಾರಿಕೆ, ಕುರಿ, ಹಂದಿ ಸಾಕಣೆ, ಮೀನುಗಾರಿಕೆ ಇತ್ಯಾದಿ ಚಟುವಟಿಕೆಗಳು ಸಹಕಾರಿ ತತ್ವದ ಮೇಲೆ ರೂಪಿಸಲಾಗಿದೆ. ಇವುಗಳ ಜೊತೆಗೆ ಅತ್ಯಂತ ಪ್ರಮುಖವಾದ ಮತ್ತೊಂದು ಕೈಗಾರಿಕೆ ಎಂದರೆ ಟಿಂಬರ್ ವರ್ಕ್ಸ್. ಶೇಕಡ 86ರಷ್ಟು ಕಾಡನ್ನು ಈ ಟಿಂಬರ್ ವರ್ಕ್ಸ ಒಳಗೊಳ್ಳುತ್ತದೆ.

ಪ್ರಾಥಮಿಕ ಆರೋಗ್ಯ ಕೇಂದ್ರಗಳಿದ್ದು ಇಲ್ಲಿನ ಜನರ ಆರೋಗ್ಯದ ಕಡೆಗೆ ಲಕ್ಷ್ಯವಹಿಸುತ್ತವೆ.

ಇವುಗಳಲ್ಲದೆ ಹಲವಾರು ಸರಕಾರಿ ಕಛೇರಿಗಳಿವೆ. ಮುಖ್ಯ ಪ್ರದೇಶದಿಂದ ಟ್ರಾನ್ಸ್‌ಫರ್ ಮೇಲೆ ಬಂದು ನೆಲೆಸಿದ ಎಲ್ಲ ವರ್ಗದ ಅಧಿಕಾರಿಗಳು ಇದ್ದಾರೆ.

ಅಂಡಮಾನಿನಲ್ಲಿ ಎಲ್ಲ ಅನುಕೂಲಗಳೂ ಇವೆ. ಈ ನಾಡಿನ ಅಭಿವೃದ್ಧಿ ಸಂಬಂಧವಾಗಿ ಸರಕಾರ ಹತ್ತಾರು ಯೋಜನೆಗಳನ್ನು ಹೊಸ ಹೊಸದಾಗಿ ರೂಪಿಸುತ್ತಲೇ ಇದೆ. ಆಡಳಿತದ ಅನುಕೂಲಕ್ಕಾಗಿ ಈ ಪ್ರದೇಶವನ್ನು ಅಂಡಮಾನ ಮತ್ತು ನಿಕೋಬಾರ್‌ಗಳೆಂದು ಎರಡು ಜಿಲ್ಲೆಗಳಾಗಿ ವಿಭಾಗಿಸಲಾಗಿದೆ. ಪೋರ್ಟ್‌ಬ್ಲೇರ್ ಅಂಡಮಾನಿನ ಮುಖ್ಯ ಆಡಳಿತ ಕೇಂದ್ರವಾದರೆ ಕಾರ್ನಿಕೋ ನಿಕೋಬಾರಿನ ಕೇಂದ್ರವಾಗಿದೆ.

ಇಷ್ಟೊಂದು ಜನಜಾತಿಗಳಿದ್ದು ಶಾಂತಿ ಸೌಹಾರ್ದತೆಯ ವಾತಾವರಣವಿದ್ದರೂ ಇಲ್ಲಿನ ಬುಡಕಟ್ಟಿನ ಜನಜಾತಿಗಳು ಮಾತ್ರ ಹೊರಗಿನಿಂದ ಬಂದು ನೆಲಸಿದವರೊಂದಿಗೆ ಅಷ್ಟಾಗಿ ಸಂಪರ್ಕವನ್ನು ಪಡೆದಿಲ್ಲ. ನಾಲ್ಕು ನೆಗ್ರಿಟೋ ಜನಾಂಗಗಳಲ್ಲಿ ಗ್ರೇಟ್ ಅಂಡಮಾನಿಗಳು ಮತ್ತು ಓಂಗೆಗಳಾದರೂ ಸ್ವಲ್ಪ ಮಟ್ಟಿಗೆ ವಾಸಿ. ಸರಕಾರಿ ಯೋಜನೆಗಳಿಗೆ ಸ್ಪಂದಿಸುತ್ತ ಆಧುನಿಕ ಸುಧಾರಿತ ಬದುಕಿನ ಕಡೆಗೆ ಕ್ರಮೇಣ ಹೊರಳುತ್ತಿದ್ದಾರೆ. ಸರಕಾರಿ ಆಧಿಕಾರಿಗಳ ಜೊತೆಗೆ ಆಗಾಗ ಬಂದು ವ್ಯವಹಾರ ನಡೆಸಿ ಅನುಕೂಲಗಳನ್ನು ಪಡೆಯುತ್ತಾರೆ. ಪೋರ್ಟ್ ಬ್ಲೇರಿಗೆ ಬಂದು ಸಾಮಾನು ಸರಂಜಾಮುನ್ನು ಕೊಳ್ಳುತ್ತಾರೆ. ಹಾಗೆಯೇ ಇಲ್ಲಿನ ಹಿಂದಿ ಭಾಷೆಯ ಶಬ್ದಗಳನ್ನು ಕಲಿತು ವ್ಯವಹಾರಕ್ಕೆ ಬಳಸಿಕೊಳ್ಳುತ್ತಾರೆ.

ಜಾರವಾ ಮತ್ತು ಸೆಂಟಿನೆಲಿಗಳು ಮಾತ್ರ ಇನ್ನೂ ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಂಡಿದ್ದಾರೆ. ಹೊರಗಿನವರನ್ನು ಕಾಣುವುದು ತಮ್ಮನ್ನು ರಕ್ಷಿಸಿಕೊಳ್ಳುವ ಸಂದರ್ಭದಲ್ಲಿ ಮಾತ್ರ! ತಮ್ಮ ಪ್ರದೇಶದೊಳಗೆ ಅನ್ಯರು ಯಾರೂ ಕಾಲಿಡದಂತೆ ಮೈಯೆಲ್ಲ ಕಣ್ಣಾಗಿ ಕಾಯುತ್ತಾರೆ.

ಅವರ ಜೊತೆ ಸಂಪರ್ಕವೇರ್ಪಡಿಸಿಕೊಳ್ಳಲು ಅವರನ್ನು ಬದುಕಿನ ಮುಖ್ಯ ಪ್ರವಾಹದೊಳಕ್ಕೆ ಸೆಳೆದುಕೊಂಡು ಅವರಲ್ಲಿ ಸುಧಾರಣೆ ತರುವುದಕ್ಕಾಗಿ ಕೆಲವು ಸಾಹಸದ ಗುಂಪುಗಳು ಪ್ರಯತ್ನಿಸುತ್ತಿವೆ. ಸ್ವಲ್ಪ ಮಟ್ಟಿಗೆ ಸಾಧಿಸಿಯೂ ಇದ್ದಾರೆ. ಆಹಾರ ಸಾಮಗ್ರಿ, ಬಟ್ಟೆ ಬರೆ, ತೆಂಗಿನ ಕಾಯಿ ಇತ್ಯಾದಿ ಆಮಿಷಗಳಿಂದ ಸ್ನೇಹ ವಾತಾವರಣವನ್ನು ಮೊದಲು ಉಂಟುಮಾಡಿ ಕ್ರಮೇಣ ಅವರನ್ನು ತಲುಪುವಂತಹ ಪ್ರಯತ್ನಗಳು ನಡೆಯುತ್ತಿವೆ.

ಅಂಡಮಾನ್ ಮತ್ತು ನಿಕೋಬಾರ್‌ಗಳು ನಿಸರ್ಗದ ವರದಾನ. ಜನರಹಿತವಾಗಿ ಮೂಲೆ ಗುಂಪಾಗಿ, ಭೂಪಟದಲ್ಲಿ ಎಲ್ಲಂಯೋ ಒಂದು ಚುಕ್ಕೆಯಾಗಿ ಮಾತ್ರವೇ ಗುರುತಿಸಿಕೊಂಡಿದ್ದ ಅಂಡಮಾನ್ ಊಹಿಸಲೂ ಆಗದಷ್ಟು ಅಭಿವೃದ್ಧಿ ಹೊಂದಿದೆ. ಆರೋಗ್ಯ, ಶಿಕ್ಷಣ, ನಾಗರೀಕ ಸೌಲಭ್ಯಗಳು, ಕೈಗಾರಿಕೆ, ವ್ಯಾಪಾರ, ವ್ಯವಹಾರ, ಸಂಸ್ಕೃತಿ –ಇತ್ಯಾದಿ ಎಲ್ಲ ವಿಷಯುಗಳಲ್ಲೂ ಸಾಕಷ್ಟು ಮುಂದುವರಿದಿದೆ. ಶಾಲಾ ಕಾಲೇಜುಗಳಿದ್ದು, ಇಲ್ಲಿನ ಜನ ವಿದ್ಯಾವಂತರಾಗಿದ್ದಾರೆ.

## ಇನ್ನಷ್ಟು ಅಲೆದಾಟ : –

ಈಗಾಗಲೇ ನಾಲ್ಕು ದಿನಗಳು ಕಳೆದಿದ್ದವು. ನಾಲ್ಕು ಕ್ಷಣಗಳಂತೆ! ನೋಡಬೇಕಾದ ಸ್ಥಳಗಳು ಇನ್ನೂ ಉಳಿದಿದ್ದವು. ಶೈಕ್ಷಣಿಕ ಪ್ರವಾಸದ ಸಾರ್ಥಕತೆಯಂತೆ ರಾಶಿ ರಾಶಿ ಜಲ ಜಂತು ಮಾದರಿಗಳು. ಹವಳದ ಬಳ್ಳಿಗಳು! ಸಂಗ್ರಹ ಕಾರ್ಯವನ್ನು ಮೊದಲು ಮುಗಿಸಿದ್ದೆವು !! 18–11–89 ರಂದು ಬೆಳಿಗ್ಗೆ, ನಮ್ಮ ಸುತ್ತಾಟದ ಅನುಕೂಲಕ್ಕಾಗಿ ಒಂದು ವ್ಯಾನನ್ನು ಬಾಡಿಗೆಗೆ ಪಡೆದವು. ಮಳೆ ಬೇರೆ ಒಂದೇ ಸಮನೆ ಸುರಿಯುತ್ತ ನಮ್ಮ ಉತ್ಸಾಹಕ್ಕೆ ಸವಾಲಾಗಿತ್ತು. ಪೋರ್ಟ್‌ಬ್ಲೇರ್ ತಲುಪಿದ್ದಂತೆ ಎದುರಾದ ತುಂತುರು ಮಳೆಯನ್ನು ವೆಲ್ ಕಮ್ ಷವರ್ಸ್ ಎಂದು ಹಿಗ್ಗಿದ್ದ ನಮಗೆ ನಮ್ಮೆಲ್ಲ ಓಡಾಟಗಳಿಗೆ ಅಡಚಣೆ ಉಂಟು ಮಾಡುತ್ತಿದ್ದ ಈ ಮಳೆಯ ಬಗ್ಗೆ ಬೇಸರವೆನಿಸಿತು. ಅಂಡಮಾನದ ಹುಡುಗಿಯ ಆನಂದ ದುಃಖ–ಎಲ್ಲಕ್ಕೂ ಮಳೆಯ ಕಂಬನಿಯೊಂದೆ ಅಭಿವ್ಯಕ್ತಿಯೇನೋ ಎನಿಸಿತು. ಇಲ್ಲಿದ್ದವರಿಗೆ ಮಳೆ ಮಾಮೂಲಿ ಸಂಗತಿಯೇ ಸರಿ. ಜಿಟಿ ಜಿಟಿ ಸುರಿವ ಮಳೆಯಲ್ಲಿಯೇ ಡಕೋಟ ವ್ಯಾನನ್ನು ಹತ್ತಿದೆವು. ಮೊದಲೇ ಅಂಡಮಾನಿನ ರಸ್ತೆಗಳು ಹೇಳುವಂತಿಲ್ಲ. ಹಳ್ಳ ದಿಣ್ಣೆ, ಹಾವಿನಂತೆ ವಕ್ರ ವಕ್ರವಾಗಿ ಸಾಗುವ ರಸ್ತೆಗಳು. ಹೆಜ್ಜೆ ಹೆಜ್ಜೆಗೂ ಎದುರಾಗುವ ತಿರುವುಗಳು! ಓಹ್ ವ್ಯಾನೊಳಗೆ ಕುಳಿತಿದ್ದ ನಮಗೆ ಆದ ಅನುಭವ ಹೇಳತೀರದು. ಟಾಪಿದ್ದ ವ್ಯಾನಾದರೂ ದೊಡ್ಡ ಕಣ್ಣಿನ ಜರಡಿಯೊಳಗಿಂದ ಸುರಿವಂತೆ ಮಳೆ ನೀರು ನಮ್ಮೆಲ್ಲರಿಗೂ ಮೂರ್ಧಾಭಿಷೇಕ ಮಾಡಿಸುತ್ತಿತ್ತು. ಅದರ ಕಾಲುಕಾಟ, ವಾಲುವಿಕೆಗಳು ನಮ್ಮಲ್ಲಿನ ಜಟಕಾ ಬಂಡಿಗಿಂತ ಭಯಂಕರ ಅನುಭವವನ್ನು ನೀಡುತ್ತಿತ್ತು. ಮೈ ಎಲುಬುಗಳೆಲ್ಲ ಈ ವ್ಯಾನಿನ ಪ್ರಯಾಣ ಮುಗಿದ ಮೇಲೂ ಸ್ವಸ್ಥಿಯಲ್ಲಿದ್ದರೆ ನಮ್ಮ ಪುಣ್ಯವೆಂದು ಭಾವಿಸಿದೆವು. ಹುಡುಗರಿಗೆ ಇದು ಮೋಜಿನ ಪಯಣ. ಒಂದೊಂದು ತಿರುವಿಗೂ ಒಬ್ಬರ ಮೇಲೊಬ್ಬರು ಬೀಳುತ್ತಿದ್ದರು.

ಪ್ರಾಯದಲ್ಲಿದ್ದ ಹುಡಗ ಹುಡುಗಿಯರಿಗೆ ಬಯಸದೆ ಬಂದ ಈ ಪರಸ್ಪರ ಸ್ಪರ್ಷಾನುಭೂತಿ ಸ್ವಾಗತಾರ್ಹವೆನಿಸಿತು. ಒಂದೊಂದು ಸಲಕ್ಕೂ ಹೋ... ಎಂದು ಕೂಗುತ್ತ, ವ್ಯಾನಿನಾಚೆಗೆ ತಲೆ ತೂರಿಸಿ ಅಲ್ಲಿನ ಜನರಿಗೆ ಕೈ ಬೀಸುತ್ತ ನಗುತ್ತ. ಕೇಕೆ ಹಾಕುತ್ತ ಅಂಡಮಾನಿನ ಬೀದಿಗಳಲ್ಲೆಲ್ಲ ಸುತ್ತಾಡಿ, ಜನರಲ್ಲಿಯೂ ನಗೆ ಉತ್ಸಾಹಗಳನ್ನು ಕೆರಳಿಸಿದರು.

ಒಮ್ಮೆ ಎತ್ತಿ ಕುಕ್ಕಿದರೆ ತಲೆಗಳು ವ್ಯಾನಿನ ಟಾಪಿಗೆ ತಗುಲಿ ತೆಂಗಿನಕಾಯಂತೆ ಒಡೆದು ಹೋಳಾಗುವುದೇನೋ ಎಂಬ ಭೀತಿ ಮೂಡುತ್ತಿತ್ತು. ಅದರ ಕುಲುಕಾಟಕ್ಕೆ ತಿಂದಿದ್ದೆಲ್ಲ ಹೊಟ್ಟೆಯೊಳಗೆ ಕಲಕಿದಂತಾಗುತ್ತಿತ್ತು. ಆದರೂ ಎದೆಗೆಡಲಿಲ್ಲ. ಸ್ಥಿತಪ್ರಜ್ಞರಂತೆ ಕುಳಿತಿದ್ದು ನಮ್ಮ ಅಲೆದಾಟ ಮುಂದುವರೆಸಿದೆವು.

ಅಂಡಮಾನಿನಲ್ಲಿ ನಮಗೆ ನೋಡಬೇಕಗಿದ್ದವುಗಳೆಂದರೆ ಹಾರ್ಟಿಕಲ್ಚರ್ ವಿಭಾಗ, ಅನಿಮಲ್ ಹಸ್‌ಬೆಂಡರಿ, ಕ್ರಾಫ್ ಇಂಪ್ರೂವ್‌ಮೆಂಟ್ ವಿಭಾಗ, ಚಾತಮ್‌ನ ಮರದ ಕಾರ್ಖಾನೆ ಮಿನಿಜೂ, ಮ್ಯೂಸಿಯಂ ಮುಂತಾದವುಗಳಾಗಿದ್ದವು. ಇವುಗಳಲ್ಲಿ ಒಂದೊಂದೂ ಒಂದು ಮುಖ್ಯ ನಾಡಿಯಾಗಿದ್ದವು. ಇನ್ನೊಂದು ಅತಿ ಮುಖ್ಯವಾದದ್ದೆಂದರೆ ಸಿ.ಎ.ಆರ್. ಪಿ (ಸೆಂಟ್ರಲ್ ಅಗ್ರಿಕಲ್ಚರಲ್ ರೀಸರ್ಚ ಇನ್‌ಸ್ಟಿಟ್ಯೂಟ್). ಭತ್ತದ ಬೆಳೆಯನ್ನು ಅಭಿವೃದ್ಧಿ ಪಡಿಸುವ ಮತ್ತು ಪಶುಪಾಲನಾ ಸಂಬಂಧವಾಗಿ ಸಂಶೋಧನೆಗಳು ನಡೆಯುತ್ತಿದ್ದವು. 4800 ಹೆಕ್ಟೇರ್ ಪ್ರದೇಶದಲ್ಲಿ, 30,000 ಹೆಕ್ಟೇರ್ ಪ್ರದೇಶದಲ್ಲಿ ತೆಂಗು ಬಾಳೆ, ಪರಂಗಿ ಇತ್ಯಾದಿಗಳನ್ನೇ ಹೆಚ್ಚಾಗಿ ಬೆಳೆಯುತ್ತಿದ್ದಾರೆ. ಇಲ್ಲಿ 32 ಜಾತಿಯ ಬಾಳೆ, 17 ಜಾತಿಯ ಪರಂಗಿ ಗಿಡಗಳಿವೆಯಂತೆ. ಹಾಲು ಹೈನುಗಾರಿಕೆಯ ಉತ್ಪತ್ತಿ ಪ್ರಮಾಣ ತೀರಾ ಕಡಿಮೆ. ಇಲ್ಲಿ ಹಸುಗಳಿಗೆ ಉಳಿಗಾಲವೇ ಇಲ್ಲ. ಒಂದು ವಿಚಿತ್ರ ಪರಿಸ್ಥಿತಿ! ವಾತಾವರಣ 'ವಾಟರ್ ವಾಟರ್ ಎವೆರಿ ವೇರ್, ನಾಟ್ ಎ ಡ್ರಪ್ ಟು ಡ್ರಿಂಕ್ ಎನಿವೇರ್' ಎಂಬ ಗಾದೆಯಂತೆ ಎಲ್ಲಿನೋಡಿದರೂ ಕಣ್ಣಿಗೆ ಹಬ್ಬದಂತೆ ಹಸಿರು. ಸಸ್ಯ ಶ್ಯಾಮಲತೆ! ಆದರೆ ಹಸುಗಳಿಗೆ ಮೇವಾಗುವುದಿಲ್ಲ. ಯಾವುದೋ ರಾಸಾಯನಿಕ ಪದಾರ್ಥ, ಸೂಕ್ಷ್ಮ ಜೀವಾಣು ಹಸುಗಳನ್ನು ಕೊಲ್ಲುತ್ತಿದೆ. ಎಲ್ಲಿ ನೋಡಿದರೂ ರೋಗಗ್ರಸ್ತ ಬಡಕಲು ಹಸುಗಳು ಅನಾಥವಾಗಿ ಅಲೆಯುತ್ತಿರುತ್ತವೆ. ರೋಗ ನಿರೋಧಕಗಳನ್ನು ಚುಚ್ಚುಮದ್ದಾಗಿ ನೀಡಿದರೂ ಪರಿಹಾರವೇ ಇಲ್ಲದಂತಿದೆ. ಸಂಶೋಧನೆಗಳೇನೋ ನಡೆಯುತ್ತಿವೆ... ಅದಕ್ಕೆಂದೇ ಈ ಪ್ರದೇಶದಲ್ಲಿ ಹಾಲಿಗೆ ದುಬಾರಿ ಮತ್ತು ಹಾಲಿನ ಸರಬರಾಜು ಅಷ್ಟಾಗಿ ಇಲ್ಲದ ಕಾರಣ ಕಾಫಿ, ಟೀಗಳು ಧಾರಾಳವಾಗಿ ಸಿಗಲಾರದು.

ಈ ಕೇಂದ್ರ ವ್ಯವಸಾಯ ಸಂಶೋಧನಾ ಸಂಸ್ಥೆಗೆ ಸಂಬಂಧಿಸಿದಂತೆ ಕೀಟ ಸಂಗ್ರಹಾಲಯವೊಂದಿದೆ. ಇಲ್ಲಿ ಕೀಟಲೋಕದ ಅದ್ಭುತಗಳು ತೆರೆದು ನಿಂತಿವೆ. ಸೂಜಿ ಮೊನೆಯಷ್ಟಿನ ಕೀಟಗಳಿಂದ ಹಿಡಿದು ದೈತ್ಯ ಕೀಟಗಳ ವರೆಗೆ ಸಾವಿರಾರು ಜಾತಿಯ ಕೀಟಗಳು ಅತ್ಯಂತ ಮೋಹಕವಾದ ಅದ್ಭುತ ವರ್ಣ ಜಾಲವನ್ನೇ ನಮ್ಮ ಮುಂದೆ ನಿಲ್ಲಿಸಿವೆ. ಎಷ್ಟೊಂದು ಬಣ್ಣಗಳು ! ಆಕಾರಗಳು ! ಹಾರುವ ರೆಕ್ಕೆಯ ಕೀಟಗಳು. ಅದರಲ್ಲಿಯೂ ಚಿಟ್ಟೆಗಳು ! ಓಹ್ ಸ್ವರ್ಗದ ಅಪ್ಸರೆಯರಂತೆ ಕಾಣುವ ಇವುಗಳು ಇಲ್ಲಿ ಸೆರೆ ಬಿದ್ದಿವೆಯೇನೋ

ಎನ್ನಿಸುತ್ತವೆ! ವಿಶ್ವದ ವರ್ಣಮಯ ಸೌಂದರ್ಯವೇ ಕೀಟರೂಪಗಳಲ್ಲಿ ಸಾಂದ್ರಗೊಂಡು, ಸಂಕ್ಷೇಪಗೊಂಡು ಮಡುಗಟ್ಟಿ ನಿಂತಿರಬೇಕು ಎನಿಸಿತು.

ಪ್ರತಿಯೊಂದು ಗಾಜಿನ ಪೆಟ್ಟಿಗೆಗಳಲ್ಲಿ ಜೋಡಿಸಿಟ್ಟ ವಿವಿಧ ಆಕಾರ, ಬಣ್ಣ, ಜಾತಿಯ ಕೀಟಗಳ ಕೆಳಗೆ ಆಯಾ ವರ್ಗ, ಜಾತಿಗಳ ಮತ್ತು ಆ ಕೀಟಗಳ ಹೆಸರುಗಳನ್ನು ಅಚ್ಚುಕಟ್ಟಾಗಿ ನಮೂದಿಸಲಾಗಿತ್ತು. ಕೀಟಶಾಸ್ತ್ರ ಸಂಶೋಧನೆಯೇ ಈ ವಿಭಾಗದ ಮುಖ್ಯ ಉದ್ದೇಶ.

ಜೊತೆಗೆ ಬಾಟಲುಗಳಲ್ಲಿ ಗೆದ್ದಲು, ಮಿಡಿತೆ, ಇರುವೆ, ಬೀಟಲ್ಸ್ ಜಾತಿಯ ಅನೇಕ ಹುಳುಹುಪ್ಪಟೆ, ಹಲ್ಲಿಗಳನ್ನು ರಕ್ಷಿಸಿ ಇಟ್ಟಿದ್ದರು. ಒಂದರ ಬಣ್ಣದಂತೆ ಮತ್ತೊಂದಿಲ್ಲ. ಒಂದು ಬಾಟಲಿಯಲ್ಲಿ ಕೂಡಿದ್ದ ಇಂದ್ರಗೋಪಗಳ (ಗ್ಲೋವವರ್ಮ್ಸ್)ನ್ನು ನೋಡಿ ನನಗೆ ಕುವೆಂಪು ವರು ತಮ್ಮ ಕವಿತೆ 'ಇಂದ್ರ ಗೋಪದಲ್ಲಿ ಅವುಗಳನ್ನು ಶಾಪಗ್ರಸ್ಥ ಅಪ್ಸರೆಯರೆಂದು ಸಂಬೋಧಿಸಿದ್ದು ನೆನಪಾಯಿತು. ಕತ್ತಲೆಯಲ್ಲಿ ಇವು ಬೆಳಕಿನ ಕುಡಿಗಳಂತೆ, ಪುಟ್ಟ ಪುಟ್ಟ ಹಣತೆಗಳಂತೆ ಉರಿಯುವುದನ್ನು ಕಂಡಿದ್ದನ್ನು ಮತ್ತೊಮ್ಮೆ ನೆನಪಿಸಿಕೊಂಡಾಗ ಮೈ ಜುಂ ಎಂದಿತು. ಇಂತಹ ವರ್ಣಮಯ ಚಿಟ್ಟೆಗಳೇ ಬೇಂದ್ರೆಯವರ 'ಪಾತರಗಿತ್ತಿ' ಕವಿತೆಗೆ ಸ್ಫೂರ್ತಿಯಾಗಿರಬೇಕೆನಿಸಿತು.

ಇವುಗಳನ್ನು ನೋಡಿದ ನನಗೆ ಹುಚ್ಚೆದ್ದು ಕುಣಿಯಬೇಕೆನಿಸುತ್ತಿದ್ದಾಗಿ ಇನ್ನು ಹುಡುಗರ ಹರ್ಷೋದ್ಗಾರಗಳಿಗಂತೂ ನಿಲಗಡೆ ಇಲ್ಲವಾಯಿತು. ಎಷ್ಟು ಸಲ ನೋಡಿದರೂ ತನಿಯದ ಸೌಂದರ್ಯ ದಾಹ! ಕೀಟಶಾಸ್ತ್ರದ ಬಗ್ಗೆ ಅತಿಯಾದ ಅಧ್ಯಯನಾಸಕ್ತಿಯುಳ್ಳ ಜೀವಶಾಸ್ತ್ರ ವಿಭಾಗದ ಮೇಡಂ ಆಗಿದ್ದ ಡಾ॥ ಲೀಲಾಗಂತೂ ಸ್ವರ್ಗವೇ ಕೈಗೆ ಎಟುಕಿದಂತಿತ್ತು. ಇಬ್ಬರದೂ ಒಂದೊಂದು ಬಗೆಯ ಆಲೋಚನೆ, ಅವಳ ಬುದ್ಧಿ ಅರಳುತ್ತಿದ್ದರೆ, ನನ್ನ ಕಲ್ಪನೆ ಗರಿ ಬಿಚ್ಚುತ್ತಿತ್ತು. ಕವಿತೆ ಕಟ್ಟುವ ಮನಸ್ಸು ಮಾಡಿದೆ. ಅವಳು ಕೀಟಶಾಸ್ತ್ರ ಸಂಬಂಧವಾದ ಲೇಖನಗಳಿಗೆ ಬೇಕಾದ ಮಾಹಿತಿಗಳನ್ನು ಸಂಗ್ರಹಿಸಿಕೊಳ್ಳುತ್ತಿದ್ದಳು. ಹುಡುಗರಿಗೆ ಇದ್ಯಾವುದೂ ಬೇಡ. ಅವರಿಗೆ ಅವರದೆ ಲೋಕ! ಅವರವರ ದರುಶನಕೆ, ಅವರವರ ಭಾವಕ್ಕೆ ಆ ಕೀಟ ಜಗತ್ತು ಬಾಗಿಲುಗಳನ್ನು ತೆರೆದಿರಿಸುತ್ತಿದ್ದವು. ಅವರವರ ಗುಂಗಿನಲ್ಲಿ ಅವರವರು ವ್ಯಸ್ತರಾಗಿದ್ದರು. ಲೀಲಾಳ ಸಂಭ್ರಮವೇ ಸಂಭ್ರಮ! ... ಅಧಿಕಾರಿಗಳಿಂದ ಹಲವು ಮಾದರಿಯ ಕೀಟಗಳನ್ನು ಕೇಳಿ ಪಡೆದಳು. ಪಡೆದದ್ದನ್ನು ಬಾಟಲಿಯೊಂದರ ಬಾಯೊಳಗಿಂದ ಮೆಲ್ಲ ಮೆಲ್ಲನೆ ಇಳಿಸಿದಳು. ಸಾಲದ್ದಕ್ಕೆ ಇವಳ ಗೃಧ್ರ ದೃಷ್ಟಿಗೆ ಕಾಡ ಹಲ್ಲಿಯೊಂದು ಬೀಳಬೇಕೆ? ....ಅದನ್ನೂ ಛಂಗನೆ ನೆಗೆದು ಸಲೀಸಾಗಿ ಹಿಡಿದು ಬಿಟ್ಟಳು ! ನನಗೆ ಛಿ! ಛಿ! ಛೆ! ಛೆ!- ಎನಿಸಿತು. ಅಸಹ್ಯ ಮತ್ತು ಅನುಕಂಪಗಳು ಒಟ್ಟಿಗೆ ಆದವು. ಒಂದು ಸಲ ಲೀಲಾ ವಿದ್ಯಾರ್ಥಿಗಳ ಕಡೆ ತಿರುಗಿ, ಹಿಂತಿರುಗಿ ಹೋದ ಮೇಲೆ ತಾವಿಲ್ಲಿ ನೋಡಿದ್ದರ ಬಗ್ಗೆ 'ಟೆಸ್ಟ್' ಇಡುವುದಾಗಿ ಘೋಷಿಸಿದ್ದೆ, ಅವರ ಎದೆ ಧಸ್ ಎಂದಿರಬೇಕು. ತಕ್ಷಣ ಎಚ್ಚರಗೊಂಡರು. ಮತ್ತೊಮ್ಮೆ ಒಂದು ಸುತ್ತು ಹಾಕಿ ಅಧಿಕಾರಿಗಳಿಂದ ಒಂದೊಂದೂ ವಿವರವನ್ನು ಕೇಳಿ ಪಡೆದರು. ಮರೆಯುವ ಅಪಾಯ ತಪ್ಪಿಸಲು ಕೈಲಿರಿಸಿಕೊಂಡಿದ್ದ ನೋಟ್ ಬುಕ್ಕುಗಳಲ್ಲಿ ಗಬ ಗಬನೆ ವಿವರಗಳನ್ನು ದಾಖಲು ಮಾಡಿಕೊಂಡರು. ಅಲ್ಲಿಗೆ ನಮ್ಮ ಅಲ್ಲಿನ ಭೇಟಿ ಸಾಕಾಗಿತ್ತು. ಇನ್ನೂ ಮುಂದೆ

ನಮಗೆ ಸಾಕಷ್ಟು ಸ್ಥಳಗಳನ್ನು ಸಂದರ್ಶಿಸಬೇಕಿತ್ತು. ಪುರುಷೋತ್ತಂ ಅವರು ವ್ಯಾನ್ ಹತ್ತಲು ಹುಡುಗರನ್ನು ಆತುರ ಪಡಿಸಿದರು.

ಸರಿ ಎಲ್ಲರೂ ವ್ಯಾನ್ ಹತ್ತಿ ಒಂದು ಬಸ್ತಿಯ ಮೂಲಕವಾಗಿ ಹಾದು ಸಿಪ್ಪಿಘಾಟ್ ತಲುಪಿದೆವು. ಅತ್ಯಂತ ರಮಣೀಯ ಪರಿಸರದಲ್ಲಿ ನೆಲೆಸಿದ್ದ ಅಗ್ರಿಕಲ್ಚರಲ್ ಫಾರ್ಮ್‌ನಲ್ಲಿ ಮೀನು ಮತ್ತು ಸಿಗಡಿ – ಅಭಿವೃದ್ಧಿ ಸಾಕಣೆ ಕಾರ್ಯಗಳು ಸಾಕಷ್ಟು ಉತ್ತಮ ರೀತಿಯಲ್ಲಿ ಸಾಗುತ್ತಿವೆ. ಸಿಗಡಿ ಮತ್ತು ಮೀನಿನ ಸಂತಾನಾಭಿವೃದ್ಧಿ ಸಂಬಂಧವಾಗಿ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಸಂಶೋಧನಾ ಚಟುವಟಿಕೆಗಳು ನಿರಂತರವಾಗಿ ನಡೆಯುತ್ತಿವೆ. ಅಲ್ಲೆಲ್ಲಾ ಸುತ್ತಾಡಿ, ಮುಂದೆ ಕಾಟೇಜ್ ಕ್ರಾಫ್ಟ್ ಎಂಪೋರಿಯಂ ಮತ್ತು ಆಂತ್ರೋಪಾಲಜಿಕಲ್ ಸರ್ವೇ ಆಫ್ ಇಂಡಿಯಾ ಆಂತ್ರೋ ಪಾಲಾಜಿಕಲ್ ಮ್ಯೂಸಿಯಂಗಳನ್ನು ಸಂದರ್ಶಿಸಿದೆವು. ಇಲ್ಲಿಗೆ ಈ ಮೊದಲೇ ನಾನೂ ಲೀಲಾ ಬಂದಿದ್ದೆವು. ನನಗೆ ಬೇಕಾದ ಚಿತ್ರಗಳನ್ನು, ವಿವರಗಳನ್ನು ಆಗಲೇ ನನ್ನ ಬಳಿ ಸಂಗ್ರಹಿಸಿ ಇಟ್ಟುಕೊಂಡಿದ್ದೆ. ಈಗ ವಿದ್ಯಾರ್ಥಿಗಳ ಜೊತೆ ಮತ್ತೊಮ್ಮೆ ಬಂದಂತಾಯಿತು. ಇಲ್ಲಿನ ಮೂಲ ನಿವಾಸಿಗಳ ಜೀವನ ವಿಧಾನವನ್ನು ಬಿಂಬಿಸುವ ವಸ್ತುಗಳೆಲ್ಲವನ್ನೂ ಪ್ರದರ್ಶಿಸಿದ್ದರು. ಅವರು ಬಳಸುವ ಪಾತ್ರೆ ಪರಡಿ, ಆಭರಣಗಳು, ನಾರು ಬೇರಿನ ಬಟ್ಟೆಗಳು, ವಾಸಿಸುವ ಗುಡಿಸಲು ಮಾದರಿಗಳು, ಕಲ್ಲು, ಲೋಹಗಳಿಂದ ಮಾಡಿದ ಆಯುಧಗಳು, ಮೀನು ಹಿಡಿಯಲು ಬಳಸುವ ದೋಣಿಗಳು !... ದಿಮ್ಮಿಗಳನ್ನು ಕೊರೆದು ದೋಣಿಯಾಕಾರಕ್ಕೆ ತಂದಿದ್ದರು ! ಆ ಆಕಾರವನ್ನು ಕೊರೆಯುವಲ್ಲಿ ಅವರು ಪ್ರದರ್ಶಿಸಿದ್ದ ಅದ್ಭುತ ಕೌಶಲ್ಯವನ್ನು ನೋಡಿ ಹುಡುಗರೆಲ್ಲ ಬೆರಗಾಗಿದ್ದರು.

ಹೊರಗಿನ ಜನ ಸಂಪರ್ಕವನ್ನು ದ್ವೇಷಿಸುವ ಈ ದ್ವೀಪವಾಸಿಗಳ ಇತಿಹಾಸವೇ ಒಂದು ರೋಚಕ ಅನುಭವ. ಸ್ನೇಹ ಹಸ್ತ ಚಾಚಿದರೂ ಒಲ್ಲದ ಈ ಜನ ಜಾತಿಗಳೇ ಅಂಡಮಾನಿನ ಎಲ್ಲೆಗಳು ಆಕ್ರಮಣಕಾರರಿಂದ ಪಾದಾಕ್ರಾಂತವಾಗದೆ ಉಳಿಸಿರುವಂತಹವು. ಮುಖ್ಯವಾಗಿ ಮೂಲ ನಿವಾಸಿಗಳಾದ ಇವರಲ್ಲಿ ಜಾರವಾ, ಓಂಗೆ, ಸೆಂಟಿನೆಲಿ ಮತ್ತು ಶೋಂಪೆನರ ಬಗ್ಗೆ ಈ ಹಿಂದಿನ ಪುಟಗಳಲ್ಲಿ ವಿಸ್ತಾರವಾಗಿ ವಿವರಿಸಿದ್ದೇನೆ.

## ಅಂಡಮಾನಿನ ಹೃದಯ ಕೇಂದ್ರಗಳು : –

ಇನ್ನು ನಮಗೆ ನೋಡಲು ಉಳಿದದ್ದು ಮುಖ್ಯವಾಗಿ ಮೆರೈನ್ ಮ್ಯೂಸಿಯಂ ಮತ್ತು ಸೆಲ್ಯುಲಾರ್ ಜೈಲ್. ಇವೆರಡೂ ಸ್ಥಳಗಳು ನಾವಿದ್ದ ಹಾಸ್ಟೆಲ್‌ಗೆ ತೀರಾ ಹತ್ತಿರವಿದ್ದವು. ಆ ಜಾಗಗಳೂ ಬಹಳ ಚೆನ್ನಾಗಿದ್ದವು. ಹಾಸ್ಟೆಲಿಗೆ ಕೆಲವೆ ಗಜಗಳ ದೂರದಲ್ಲಿ ಸಮುದ್ರ ದಂಡೆ. ಹಿಂಭಾಗದಲ್ಲಿ ಅಬೆರ್‌ಡೀನ್ ಬಜಾರ್. ಎಡಗಡೆ ಒಂದು ಕಿಲೋಮೀಟರ್ ದೂರದಲ್ಲಿಯೆ ನಾವು ಹೋಗಬೇಕಿದ್ದ ಸ್ಥಳಗಳಿದ್ದವು.

ಅಷ್ಟು ಹೊತ್ತಿಗೆ ಅಂಡಮಾನಿನ ಮೂಲೆ ಮೂಲೆಗಳೂ ನಮಗೆ ಪರಿಚಿತವಾಗಿದ್ದವು. ಹುಡುಗರನ್ನು ನಾವು ಪ್ರಾಥಮಿಕ ಶಾಲೆಯ ಮಕ್ಕಳಂತೆ ಕೈ ಹಿಡಿದು ಕರೆದೊಯ್ಯಬೇಕಿರಲಿಲ್ಲ.

ಅವರ ಪಾಡಿಗೆ ಅವರನ್ನು ಬಿಟ್ಟು ಬಿಡೋಣವೆನಿಸಿತು. ಸುದ್ದಿ ಗೊತ್ತಾದದ್ದೇ ಹುಡುಗರು ಕುಣಿದು ಕುಪ್ಪಳಿಸಿದರು. ಹುಡುಗ ಹುಡುಗಿಯರೆಲ್ಲ ಅವರವರದೆ ಗುಂಪುಗಳನ್ನು ಮಾಡಿಕೊಂಡರು. ಮೆರೈನ್ ಮ್ಯೂಸಿಯಂ ಸೆಲ್ಯುಲಾರ್ ಜೈಲ್‌ಗಳನ್ನು ನೋಡಿ ಬರಲು ಹೇಳಿದೆವು. ಅವರು 'ಹೂಂ' ಗುಟ್ಟಿದರು. ನಮಗೆ ಗೊತ್ತಿತ್ತು. ಅವರಿಗೆ ನಮ್ಮಿಂದ ಇಂದು ಸಿಕ್ಕಿದ ಬಿಡುಗಡೆಯನ್ನು ಬೇರೆ ರೀತಿಯಲ್ಲಿ ಆಚರಿಸುತ್ತಾರೆಂಬುದು ವರ್ಷಗಳ ಅನುಭವದಿಂದ ಕಂಡು ಕೊಂಡಿದ್ದೆವು. ನಮ್ಮ ನಮ್ಮೊಳಗೆ ನಾವು ನಕ್ಕೆವು. ಬೋನಿನಿಂದಲೋ ಪಂಜರದಿಂದಲೋ ಬಿಡುಗಡೆಯಾದ ಹಕ್ಕಿಗಳಂತೆ ಗೆಲುವಿನ ರೆಕ್ಕೆಗಳನ್ನು ಹರಡಿಕೊಂಡು ಹೊರಟೇ ಹೋದರು!

ಅವರು ಅತ್ತ ಹೋದದ್ದೇ ನಾನು, ಲೀಲಾ, ಪುರುಷೋತ್ತಂ – ಮೂವರೂ ಒಟ್ಟಿಗೆ ಮೆರೈನ್ ಮ್ಯೂಸಿಯಂ ಕಡೆ ಹೆಜ್ಜೆ ಹಾಕಿದೆವು. ಅಲ್ಲಿ ಸಮುದ್ರ ಸಂಪತ್ತಿನ ಅಪಾರ ಸಂಗ್ರಹವಿತ್ತು. ಪ್ರಖರವಾದ ಬೆಳಕಿನ ಸಂಯೋಜನೆಯ ಹಿನ್ನೆಲೆಯಲ್ಲಿ ಕಿನ್‌ಕಾಪಿನ ಬಟ್ಟೆಯನ್ನು ಹರವಿ ಅದರ ಮೇಲೆ ಜೋಡಿಸಿಟ್ಟಿದ್ದ ಹವಳದ ಬಳ್ಳಿಗಳು ಕವಲೊಡೆದು ಅನೇಕ ರೇಖಾ ಶಿಲ್ಪಗಳಂತೆ ಕಲಾತ್ಮಕವಾಗಿ ಕಂಗೊಳಿಸಿದ್ದವು. ಅಕ್ವೇರಿಯಂನಲ್ಲಿ ವಿವಿಧ ಮಾದರಿಯ ಬಣ್ಣ ಬಣ್ಣದ ಮೀನುಗಳು. ನೋಡಿದರೆ ಅದೊಂದು ಸಜೀವ ಕಲಾಕೇಂದ್ರದಂತೆ ಮನಮೋಹಕವೆನಿಸಿತು. ನಾವು ಇದನ್ನೆಲ್ಲ ನೋಡುತ್ತಿದ್ದಾಗಲೆ ನಮ್ಮ ಹುಡುಗರೂ ಪ್ರತ್ಯಕ್ಷರಾದರು. ಇಲ್ಲಿಗೆ ಬರುವುದಕ್ಕೆ ಮೊದಲು ಅಂಡಮಾನಿನ ಅಬೆರ್‌ಡೀನ್ ಬಜಾರಿನಲ್ಲಿ ಅಡ್ಡಾಡಿ, ಅಲ್ಲಿನ ಹೋಟೆಲುಗಳಲ್ಲಿ ವಿಶೇಷವಾದ ಮೀನಿನ ತಿಂಡಿಗಳನ್ನು ತಿಂದು ಬಂದಿದ್ದರು. ಮನೆಗಳಿಂದ ಹೊರಗೆ ಇಷ್ಟು ದೂರ ಮೊದಲ ಬಾರಿಗೆ ಬಂದವರಿಗಂತೂ ಈ ಪ್ರವಾಸ ಒಂದು ಹೊಸ ಅನುಭವವನ್ನು ಮತ್ತು ಸ್ವಚ್ಛಂದ ಅಲೆದಾಟದ ಸವಿಯನ್ನು ನೀಡಿತ್ತು! ಇಲ್ಲಿನ ಒಂದೊಂದು ಅನುಭವವೂ ಅವರ ಸ್ಮೃತಿಯಲ್ಲಿ ಅಚ್ಚಳಿಯದ ಗುರುತುಗಳನ್ನು ಮೂಡಿಸಿವೆಯೆಂದು ಹೇಳಿಕೊಂಡು ಖುಷಿ ಪಟ್ಟರು.

ನಮ್ಮ ಜೊತೆಗೇ ಮ್ಯೂಸಿಯಂನ್ನು ಒಂದು ಸುತ್ತು ಹಾಕಿದರು. ಕಾಲದ ಪರಿವೆ ಇಲ್ಲದೆ ಬೆರಗುಗಣ್ಣುಗಳಿಂದ ಆ ಸಮುದ್ರ ಸಂಪತ್ತನ್ನು ಮತ್ತೆ ಮತ್ತೆ ನೋಡಿ ಕಣ್ತುಂಬಿಕೊಳ್ಳುತ್ತಿದ್ದರು. ಆದರೆ ಮ್ಯೂಸಿಯಂ ಬಾಗಿಲು ಮುಚ್ಚುವ ವೇಳೆಯಾಗಿದ್ದರಿಂದ ಅಲ್ಲಿನ ಸಿಬ್ಬಂದಿ ನಮ್ಮನ್ನು ಆತುರಪಡಿಸಿ ಹೊರಗೆ ಅಟ್ಟಿದರು. ಆದರೆ ಅನಿವಾರ್ಯತೆಗಾಗಿ ವಿಷಾದ ವ್ಯಕ್ತಪಡಿಸುವುದನ್ನು ಮಾತ್ರ ಮರೆಯಲಿಲ್ಲ.

ಆಗ ತಾನೇ ಕತ್ತಲಾಗಲು ಪ್ರಾರಂಭವಾಗಿತ್ತು. ಪೂರ್ತಿ ಕತ್ತಲು ಕವಿಯುವುದಕ್ಕೆ ಮೊದಲು ಸೇರಬೇಕೆಂದು ಸೆಲ್ಯುಲಾರ್ ಜೈಲ್ ಕಡೆಗೆ ಓಡಿದೆವು. ಅದೃಷ್ಟಕ್ಕೆ ಅಂದು ನಮ್ಮ ಪಾಲಿಗೆ ಪ್ರಕೃತಿ ಅನುಕೂಲವಾಗಿತ್ತು. ಸೆಲ್ಯುಲಾರ್ ಜೈಲ್ ತಲುಪುವ ಹಾದಿಯಲ್ಲಿ ಸೂರ್ಯಾಸ್ತದ ಸೊಬಗಿನ ಒಂದು ಕ್ಷಣದ ನೋಟವನ್ನು ದಕ್ಕಿಸಿಕೊಂಡೆವು. ಜನನಿಬಿಡವೂ ಜನಾರಣ್ಯಗಳೂ ಆಗಿರುವ ನಗರ ಬದುಕಿನಲ್ಲಿ ಇಂತಹ ಸುಂದರ ನಿಸರ್ಗದ ಚೆಲುವು ಸೊಬಗುಗಳು ಕನಸುಗಳಾಗಿರುವಾಗ ದಿನ ನಿತ್ಯವೂ ಸುಂದರ ದೃಶ್ಯಾವಲೋಕನದ ಅದೃಷ್ಟಕ್ಕೆ ನಮ್ಮ ಬದುಕುಗಳು ಸಾರ್ಥಕವೆನಿಸಿದವು.

ಇಂತಹ ಸುಂದರ ಸಂಜೆಯ ಅನುಭವದೊಂದಿಗೆ ಸೆಲ್ಯುಲಾರ್ ಜೈಲಿನ ಸೀಮಾರೇಖೆಯನ್ನು ಪ್ರವೇಶಿಸಿದೆವು. ಪ್ರವೇಶಿಸುತ್ತಿದ್ದಂತೆಯೇ ಎದುರಾದದ್ದು ಸ್ವಾತಂತ್ರ್ಯ ಹೋರಾಟದಲ್ಲಿ ಹುತಾತ್ಮರಾದ ವೀರ ಸಾವರ್‌ಕರ್ ಅವರ ಪ್ರತಿಮೆ. ಆ ಪ್ರತಿಮೆಯ ಮುಖದಲ್ಲೂ ಸಾಹಸದ ಜೀವಂತ ಕಳೆ ಹೊರ ಹೊಮ್ಮುತ್ತಿತ್ತು. ಹೆಜ್ಜೆ ಇಟ್ಟು ಒಳಹೋಗುತ್ತಿದ್ದಂತೆಯೇ ಅಸಂಖ್ಯ ಸಂಖ್ಯೆಯಲ್ಲಿ ನಾಡಿನ ಸ್ವಾತಂತ್ರ್ಯಕ್ಕಾಗಿ ಧೈರ್ಯ ಸಾಹಸಗಳಿಂದ ಹೋರಾಡಿ ಮಡಿದ ವೀರಯೋಧರ ಸ್ಮಾರಕ ಶಿಲಾ ಫಲಕಗಳು, ಭಾವ ಚಿತ್ರಗಳು, ಅವರ ಪ್ರತಿಮೆಗಳು ಎದುರಾದವರು. ನೋಡ ನೋಡುತ್ತಿದ್ದಂತೆಯೇ ಸ್ವಾತಂತ್ರ್ಯ ಹೋರಾಟದ ದೃಶ್ಯಗಳು, ಬಲಿದಾನ ಮಾಡಿದವರ ಚಹರೆಗಳು ನನ್ನ ಸ್ಮೃತಿ ಪಟಲದ ಮೇಲೆ ಒಂದಾದ ಮೇಲೆ ಒಂದರಂತೆ ಹಾದು ಹೋದವು. ಆ ಕ್ಷಣಕ್ಕೆ ಆ ಜೈಲು ನನಗೆ ಜಡವಸ್ತುವಾಗಿ ಕಾಣಲಿಲ್ಲ. ಇದರ ಅಣು ಅಣುವಿನಲ್ಲೂ ದೇಶಕ್ಕಾಗಿ ದುಡಿದು ಮಡಿದ ಮಹಾನುಭಾವರ ಜೀವಗಳು ಉಸಿರಡುತ್ತಿವೆ ಎನಿಸಿತು. ಇದರ ಇತಿಹಾಸ ಇಂತಹ ದೇಶ ಭಕ್ತ, ಸ್ವಾತಂತ್ರ್ಯ ಪ್ರೇಮಿಗಳ, ವೀರಯೋಧರ ನೋವಿನ ಕತೆಗಳಿಂದ ತುಂಬಿವೆ. ಬ್ರಿಟಿಷ್ ವಸಾಹತುಶಾಹಿಯನ್ನು, ಅವರ ತಂತ್ರ ಕುತಂತ್ರ, ಕ್ರೌರ್ಯಗಳನ್ನು ನೆನಪಿಗೆ ತರುವ ಪೋರ್ಟ್ ಬ್ಲೇರಿನ ಅತ್ಯಂತ ಪುರಾತನವಾದ ಈ ಕಟ್ಟಡದಲ್ಲಿ 698 ಕೋಣೆಗಳಿವೆ. ಮಧ್ಯದ ಆಧಾರ ಸ್ತಂಭದಿಂದ ಏಳು ಬಾಹುಗಳಾಗಿ ಚಾಚಿಕೊಂಡಿರುವ ಈ ಕಟ್ಟಡದ ಏರಿಯಲ್ ವ್ಯೂ ನಕ್ಷತ್ರಾಕಾರವಾಗಿ ಕಾಣಿಸುತ್ತದೆ. ಬ್ರಿಟಿಷರ ದೃಷ್ಟಿಯಲ್ಲಿ ದೇಶದ್ರೋಹಿಗಳೆನಿಸಿಕೊಂಡವರಿಗೆ ಶಿಕ್ಷೆ ಕೊಡಲು ಇದು ಅವರಿಗೆ ಸರಿಯಾದ ಜಾಗವೆನಿಸಿ 1857 ರಲ್ಲಿ ಬ್ರಿಟಿಷರ ವಿರುದ್ಧ ನಡೆದ ದಂಗೆಯಲ್ಲಿ ಸೆರೆಯಾದ 200 ಮಂದಿ ಸೆರೆಯಾಳುಗಳನ್ನು ಇಲ್ಲಿನ ಈ ದಂಡ ಕೇಂದ್ರಕ್ಕೆ ಕಳಿಸಲಾಯಿತು. ಸುಮಾರು 700 ಕ್ಕೂ ಹೆಚ್ಚು ಮಂದಿಯನ್ನು ಸೆರೆ ಇರಿಸುವ ಈ ಜೈಲಿನ ಕಟ್ಟಡ ನಿರ್ಮಾಣವಾದ್ದಂತೂ 1896 ರಲ್ಲಿ ಮಾತ್ರ. ಸೆರೆಯಾಳುಗಳನ್ನು ಇರಿಸುವ ಕೋಣೆಗಳು ಎಷ್ಟು ಇಕ್ಕಟ್ಟಾಗಿವೆ ಎಂದರೆ ಒಬ್ಬ ಕೈದಿ ಕಾಲುಮಡಿಚಿಕೊಂಡು ಮಲಗಲು ಮಾತ್ರವೇ ಸಾಧ್ಯ. ಇವುಗಳನ್ನು ಕೋಣೆಗಳು ಎಂದು ಕರೆಯುವುದಕ್ಕಿಂತ ಗುಬ್ಬಚ್ಚಿಗೂಡುಗಳೇಂದರೇನೆ ಅನ್ವರ್ಥವಾಗುತ್ತದೆ. ನೆಲದಿಂದ ಮೂರು ಮೀಟರ್ ಎತ್ತರದಲ್ಲಿ ಒಂದು ಬೆಳಕಿನ ಕಿಂಡಿ. ಹಾಗಾಗಿ ಕೈದಿಗಳಿಗೆ ಕೇಳಲು ಸಮುದ್ರ ಘೋಷದ ಹೊರತಾಗಿ ಏನೂ ಕಾಣಿಸುತ್ತಿರಲಿಲ್ಲ. ಹೆಚ್ಚೆಂದರೆ ತೂರಿ ಬರುವ ಒಂದೆರಡು ಬೆಳಕಿನ ಕಿರಣಗಳು! ಅವರ ಆಸೆಯು ಕಿರಣಗಳಷ್ಟೇ ಕ್ಷೀಣವಾಗಿ !!ಕೈಕಾಲುಗಳೂ ಸೇರಿದಂತೆ ತ್ರಿಕೋನಾಕಾರದ ಸಮಕೋಲೆಗಳಿಂದ ಬಿಗಿದ ಕೈದಿಗಳು ತಮ್ಮ ಹಣೆ ಬರಹವನ್ನು ಹಳಿದು ಕೊಳ್ಳುತ್ತಾ ಕತ್ತಲೆ ಕೋಣೆಗಳಲ್ಲಿ ಗುಕ್ಕು ಹಿಡಿದು ಉಸಿರಾಡುತ್ತ ಸಾವಿನ ಭವಿಷ್ಯಕ್ಕಾಗಿ ಎದುರು ನೋಡುವುದಷ್ಟೆ ಅವರ ಪಾಲಿನ ಭಾಗ್ಯ. ಸ್ವಾತಂತ್ರ್ಯ ಹೋರಾಟದಲ್ಲಿ ಸೆರೆಸಿಕ್ಕ ರಾಜಕೀಯ ಕೈದಿಗಳನ್ನು ನಿರ್ದಯವಾಗಿ, ನುರಿತು ಪಳಗಿದ, ಸಿದ್ಧ ಹಸ್ತ ಭಯಂಕರ ದರೋಡೆಕೋರ ಖೈದಿಗಳ ಜೊತೆಗೆ ಇವರನ್ನೂ ಸೇರಿಸಿ " ಕಪ್ಪು ನೀರಿನ" ಶಿಕ್ಷೆಗೆ ಇಲ್ಲಿಗೆ ಕಳಿಸಿದ್ದರು. ದೇಶ ಪ್ರೇಮವೂ ಕೊಲೆ ದರೋಡೆಗಳಷ್ಟೇ ಮಹಾಪರಾಧವೆನಿಸಿರಬೇಕು ಬ್ರಿಟಿಷ್ ಸಾಮ್ರಾಜ್ಯಶಾಹಿಗಳಿಗೆ !!!

ಒಂದೊಂದು ಕೋಣೆಯನ್ನು ಪ್ರವೇಶಿಸಿದಾಗಲೂ ಅಂದಿನ ಅವರ ಚೀತ್ಕಾರ, ನರಳಾಟಗಳು ಮಾರ್ದನಿಸಿ ಎದೆ ಹಿಂಡಿದಂತಾಯಿತು. ಅವರೆಲ್ಲರ ಕ್ಷೀಣ ಉಸಿರಾಟ ನನ್ನುಸಿರನ್ನು ಹಿಸುಕುತ್ತಿದ್ದಂತೆ ಭಾಸವಾಯಿತು. ಬಿಳಿ ರಾಕ್ಷಸರ ಕ್ರೂರ ಕೈಗಳಲ್ಲಿ ಅವರು ಅನುಭವಿಸಿರಬಹುದಾದ ದೌರ್ಜನ್ಯ, ದಬ್ಬಾಳಿಕೆಗಳು, ಗುರಿಪಡಿಸಿರಬಹುದಾದ ಹಿಂಸೆಯ ಕತೆಗಳು ಪಿಸುಗುಟ್ಟಿದವು. ನನ್ನೊಳಗಿನಮೂಲೆ ಮೂಲೆಗಳಲ್ಲೂ ಈ ಕತೆಗಳು ಅನುಕರಣಿತವಾದವು. ಸಾವಿರಾರು ಸಂಖ್ಯೆಯಲ್ಲಿನ ಈ ನಮ್ಮ ಸ್ವಾತಂತ್ರ್ಯವೀರರು ಇಂತಹ ಕೋಣೆಗಳಲ್ಲಿ ಜೀವಚ್ಛವಗಳಂತೆ ಬದುಕಿ 'ಝಂಡಾ ಊಂಚ ರಹೇ ಹಮಾರಾ' ಎಂದು ದೇಶ ಪ್ರೇಮ, ಸ್ವಾತಂತ್ರ್ಯ ಹೋರಾಟದ ಅಮರ ಕಾವ್ಯವನ್ನು ತಮ್ಮ ಮೂಕ ಭಾಷೆಯಲ್ಲಿ ಹಾಡಿರಬೇಕು. ಕೋಣೆಯ ಗೋಡೆಗಳ ಮೇಲೆ ಹಿಂಸೆಯಿಂದ ಚಿಮ್ಮಿದ ರಕ್ತದ ಕಲೆಗಳು ನಾಡ ತಾಯಿಯ ಹಣೆಯನ್ನು ಅಲಂಕರಿಸಲು ಇಟ್ಟ ರಕ್ತ ತಿಲಕಗಳಂತಿವೆ ! ಅದೆಲ್ಲವೂ ನೆನಪಾಗುತ್ತಿದ್ದಂತೆ ಗೆಲುವಿನಿಂದ ಗರಿಗೆದರಿ ಹಾರಿ ಕುಪ್ಪಳಿಸುತ್ತಿದ್ದ ನನ್ನ ಮನಸ್ಸು ವಿಷಾದ, ವೇದನೆಗಳ ಮಡುವಾಯಿತು. ಸ್ವತಂತ್ರ ರಾಷ್ಟ್ರದಲ್ಲಿ ನಾವಿಂದು ಸ್ವಚ್ಛಂದವಾಗಿ, ಸ್ವೇಚ್ಛೆಯಾಗಿ ಬದುಕುತ್ತ, ಸ್ವಾರ್ಥ, ಹಿಂಸೆ, ಕೊಲೆ, ಸುಲಿಗೆ, ಲಂಚಕೋರತನ, ಅಧಿಕಾರ ದಾಹ, ಅಧಿಕಾರಶಾಹಿ ಮನೋಭಾವ - ಮೊದಲಾದವುಗಳನ್ನೇ ಆದರ್ಶಗಳಾಗಿಸಿಕೊಂಡು ಮನುಷ್ಯತ್ವ ಔದಾರ್ಯ ಅನುಕಂಪ, ದೇಶಭಕ್ತಿಗಳ ಗೋರಿ ಕಟ್ಟಿರುವಾಗ, ಈ ಮುಗ್ಧ ದೇಶ ಪ್ರೇಮಿಗಳ, ಸ್ವಾತಂತ್ರ್ಯ ವೀರರ ಕೆಚ್ಚೆದೆ, ತ್ಯಾಗ, ಬಲಿದಾನಗಳಿಗೆ ಅರ್ಥವೆಲ್ಲಿ? ನಮ್ಮಂತಹ ಅಯೋಗ್ಯ ಮಂದಿಗೆ ಇಂತಹ ತ್ಯಾಗದ ಅಗತ್ಯವಿತ್ತೇ ?- ಎನ್ನುವ ಪ್ರಶ್ನೆಯೊಂದು ಬೃಹದಾಕಾರವಾಗಿ ನಿಂತಾಗ ಹೃದಯ ಭಾರವೆನಿಸಿತು. ಹೆಜ್ಜೆಗಳು ತಡವರಿಸಿದವು.

ಜೈಲಿನ ಪ್ರವೇಶ ದ್ವಾರಕ್ಕೆ ಹೊದಿಕೊಂಡಂತಿದ್ದ ಎರಡು ಬದಿಯ ಕೋಣೆಗಲಲ್ಲಿ, ಒಂದರಲ್ಲಿ ಕೈದಿಗಳ ಭಾವ ಚಿತ್ರಗಳು ಮತ್ತು ಅದರ ಕೆಳಗೆ ಯಾವ ಬಗೆಯ ಅಪರಾಧಕ್ಕಾಗಿ ಯಾವ ದಿನಾಂಕದಂದು ಈ ಶಿಕ್ಷೆವಿಧಿಸಲಾಗಿದೆ ಎಂಬುದನ್ನು ನಮೂದಿಸಿದ್ದರು. ಬಲ ಬದಿಯ ಕೋಣೆಯಲ್ಲಿ ಈ ಕೈದಿಗಳು (ಸ್ವಾತತ್ರ್ಯ ಹೋರಾಟಗಾರರು) ಬರೆದ ಪುಸ್ತಗಳು, ಕೈದಿಗಳಾಗಿ ಬಳಸುತ್ತಿದ್ದ ಪಾತ್ರೆಗಳು, ಉಡುಪುಗಳು (ಗೋಣಿಬಟ್ಟೆಯಲ್ಲಿ ಮಾಡಿದ ಚಡ್ಡಿ ಮತ್ತು ತೋಳಿಲ್ಲದ ಬನೀನು - ಇಷ್ಟೇ!) ಇವರನ್ನು ಶಿಕ್ಷಿಸಲು ಉಪಯೋಗಿಸತ್ತಿದ್ದ ಆಯುಧಗಳು ಕೈದಿಗಳಿಂದ ತಿರುಗಿಸುತ್ತಿದ್ದ ಗಾಣಗಳು - ಇತ್ಯಾದಿಗಳನ್ನು ಅಚ್ಚು ಕಟ್ಟಾಗಿ ಜೋಡಿಸಿ ಇಟ್ಟಿದ್ದರು. ಭಾವ ಚಿತ್ರಗಳಲ್ಲಿ ನೋಡಿದ್ದ ಆ ಕೈದಿಗಳ ಮುಖಗಳು ಜೀವ ಪಡೆದು ನಕ್ಕಂತೆ ಕಾಣಿಸಿತು. ಇವರೆಲ್ಲರನ್ನೂ ಪ್ರತಿನಿಧಿಸುವಂತೆ ನಿಂತಿದ್ದ ವೀರ ಸಾವರ್ ಕರ್, ಸುಭಾಷ್ ಚಂದ್ರ ಬೋಸರು ಮೈಪಡೆದು ಮಾತನಾಡಿಸಿದಂತೆ ಆ ಪ್ರತಿಮೆಗಳು ಗೋಚರಿಸಿದವು. ನಾನು ಮನಸ್ಸಿನಲ್ಲಿಯೆ ಅವರೆಲ್ಲರಿಗೆ ಭಕ್ತಿ, ಶ್ರದ್ಧಾಂಜಲಿಗಳನ್ನು ಸಮರ್ಪಿಸಿದೆ. ಅವರ ಮಾನತೆವತೆಗಾಗಿ ಅಭಿನಂದಿಸಿದೆ!

ಬ್ರಿಟಿಷರಿಗೆ ಅಂಡಮಾನಿನಲ್ಲಿ ಸಾಮ್ರಾಜ್ಯ ಸ್ಥಾಪಿಸಲು ಆಗಲಿಲ್ಲ. ಆದರೆ ಸೆಟಲ್ ಮೆಂಟಂತೂ ಇತ್ತು. ಇಲ್ಲಿನ ಹವಾಗುಣ ಅವರಿಗೆ ಅಷ್ಟಾಗಿ ಒಗ್ಗಲಿಲ್ಲ. ಮುಂದೆ ಮುಂದೆ ಅವರ ನೀತಿಗಳಲ್ಲಿ ಬದಲಾವಣೆಗಳಾದವು. ಜೀವಾವಧಿ ಶಿಕ್ಷೆ 10 ವರ್ಷಕ್ಕೆ ಇಳಿಯಿತು. 10

ವರ್ಷದ ಸೆರೆವಾಸದ ನಂತರ ಜೈಲಿನ ಹೊರಗೆ ಅಂಡಮಾನಿನಲ್ಲಿ ಸ್ವತಂತ್ರ್ಯವಾಗಿ ನೆಲೆಸುವ ಅವಕಾಶ. ಕುಟುಂಬಗಳನ್ನೂ ಕರೆತರಬಹುದಾದ ಸವಲತ್ತು ಕೈದಿಗಳಿಗೆ ದೊರೆಯಿತು. ಸ್ವಾತಂತ್ರ್ಯ ನಂತರವೂ ಅಳಿದುಳಿದ ಕೈದಿಗಳು ಅಲ್ಲಿಯೇ ನೆಲೆಸಿಬಿಟ್ಟರು. ಈಗ ಇಲ್ಲಿರುವವರಲ್ಲಿ ಎಷ್ಟೋ ಜನ ಸ್ವಾತಂತ್ಯ ಹೋರಾಟಗಾರರ ಪೀಳಿಗೆಯವರೆ! ರಾಜಕೀಯ ಕೈದಿಗಳ ಹೆಸರು, ಊರುಗಳನ್ನು ನೋಡಿದರೆ, ಬಂಗಾಳ ಮತ್ತು ಮಹಾರಾಷ್ಟದಿಂದ ಬಂದವರೇ ಆಗಿದ್ದಾರೆ. ಅದಕ್ಕೆಂದೆ ಇಲ್ಲಿನ ಜನರಲ್ಲಿ ಹೆಚ್ಚು ಮಂದಿ ಬಂಗಾಳಿಯರಾಗಿದ್ದಾರೆ. ಸ್ವಾತಂತ್ರ್ಯ ಹೋರಾಟ ಭಾರತೀಯ ಇತಿಹಾಸದ ಉದ್ಗ್ರಂಥದ ಒಂದು ನೋವಿನ ಪುಟವಾಗಿದೆ! ನನಗೆ ಮುಂದೆ ಮನಸ್ಸಾಗಲಿಲ್ಲ. ಜೈಲಿನ ಹೊರಭಾಗದಲ್ಲಿ ಇದ್ದ ಕೋಣೆಗಳಲ್ಲಿ ಒಂದು ವಿಚಿತ್ರ ವ್ಯವಸ್ಥೆ ಇತ್ತು. ತೂಗು ದಂಡನೆಗೆ ಒಳಗಾದ ಕೈದಿಗಳ ಹೆಣಗಳನ್ನು ನೆಲದ ಮೇಲೆ ಹೊದಿಸಿದ ಹಲಗೆಯನ್ನು ಯಂತ್ರ ಚಾಲಿತವಾಗಿ ಮೇಲೆತ್ತಿದರೆ, ಸಮುದ್ರದೊಳಕ್ಕೆ ತಳ್ಳುವ ವ್ಯವಸ್ಥೆ ಇತ್ತು. ಅನಾಮಧೇಯವಾಗಿ ಅಜ್ಞಾತವಾಗಿ ಎಷ್ಟೊ ಮಂದಿ ಭಾರತಾಂಬೆಯ ಕಂದಮ್ಮಗಳು ಹೀಗೆ ಕಾಲಗರ್ಭದಲ್ಲಿ ಕರಗಿ ಹೋಗಿವೆಯೊ! ಬಂಗಾರದ ಭವಿಷ್ಯದ ಕನಸುಗಳೆಷ್ಟು ಇಲ್ಲಿ ಗೋರಿಗೊಂಡಿವೆಯೋ ! ಕಲ್ಪನೆಗೂ ಮೀರಿದ ಇಂತಹ ಸಂಗತಿಗಳು ಕಣ್ಮುಂದೆ ಮರುಕಳಿಸಿ ಭಯದಿಂದ ಕಂಪಿಸಿದೆ ! ರಕ್ತ ಹೆಪ್ಪುಗಟ್ಟಿದಂತಾಯಿತು!

ಮುಂದೆ ಯಾವುದಕ್ಕೂ ಮನಸ್ಸಾಗಲಿಲ್ಲ. ನೋವಿನ ಅಂತರ್ಗೀತೆ ಹಿಂಡಿ ಹಿಪ್ಪೆ ಮಾಡುತ್ತಿತ್ತು. ಉತ್ಸಾಹ ಉಡುಗಿತ್ತು. ತಲೆ ದಿಮ್ಮೆಂದು ಭಾಸವಾಗುತ್ತಿತ್ತು. 'ದೇವರೆ ಇದೆಲ್ಲವನ್ನು ಪ್ರತ್ಯಕ್ಷವಾಗಿ ಕಾಣುವ ದುರಾದೃಷ್ಟ ನನ್ನದಾಗಲಿಲ್ಲವಲ್ಲ!' ಎಂದು ಸಮಾಧಾನ ತಂದುಕೊಳ್ಳಲು ಯತ್ನಿಸಿದೆ.

ಆದಷ್ಟು ಬೇಗ ಹಾಸ್ಟೆಲಿಗೆ ಹೋಗಿ ಕಣ್ಣುಮುಚ್ಚಿಕೊಂಡು ಮಲಗಿ ಬಿಡಬೇಕೆಂದು ಕೊಂಡೆ. ನನ್ನ ಬೇಸರ, ಒಳಗಿನ ತಳಮಳಗಳು ನನ್ನ ಗೆಳತಿಯ ಮತ್ತು ವಿದ್ಯಾರ್ಥಿಗಳ ದೃಷ್ಟಿಗೆ ಬಿತ್ತು. ಅವರು ನನ್ನತ್ತ ನೋಡುವ ರೀತಿಯಲ್ಲಿಯೆ ನನಗೆ ತಿಳಿಯಿತು. ಆದರೆ ಆ ಸಮಯದಲ್ಲಿ ನನ್ನನ್ನು ಡಿಸ್ಟರ್ಬ್ ಮಾಡಬಾರದೆಂದೆಣಿಸಿರಬೇಕು. ಅದಕ್ಕೆ ಸುಮ್ಮನಾದರು. ಅವರು ಕೇಳದೆ ಇದ್ದದ್ದು ನನಗೊಂದು ರೀತಿ ಒಳ್ಳೆಯದೇ ಆಯಿತು. ನನ್ನ ನೋವಿನ ಕತೆ ನನ್ನೊಳಗೆ ಉಳಿಯಿತಲ್ಲ ಎಂದು ಸಮಾಧಾನವಾಯಿತು.

ಅದೇ ದಿನ ಸಂಜೆ ಹಾಸ್ಟೆಲಿನಲ್ಲಿ ಅಂಡಮಾನ್ ನಿಕೋಬಾರ್ ದ್ವೀಪಗಳಿಗೆ ಸಂಬಂಧಿಸಿದಂತೆ ಡಾಕ್ಯುಮೆಂಟರಿ ಚಿತ್ರವೊಂದನ್ನು ಪೋಲೀಸ್ ಅಧಿಕಾರಿಯಾಗಿದ್ದ ಶರ್ಮ ಅವರು ತಂದು ನಮಗೆಲ್ಲರಿಗೂ ಸ್ಕ್ರೀನ್ ಮಾಡುವವರಿದ್ದರು. ಒಂದು ನಾಲ್ಕೈದು ದಿನಗಳಿಂದ ನಾವುಳಿದುಕೊಂಡಿದ್ದ ಹಾಸ್ಟೆಲಿನ ಸುತ್ತ ಮುತ್ತ ಇದ್ದ ಉಡಾಳ ಹುಡುಗರು ನಮ್ಮ ಹುಡುಗಿಯರ ಬೆನ್ನು ಹತ್ತಿ ಕೀಟಲೆ ಮಾಡುತ್ತಿದ್ದ ವಿಷಯ ಅವರಿಗೆ ತಿಳಿದು ಬಂದಿತ್ತು. ನಮ್ಮ ಯೋಗ ಕ್ಷೇಮವನ್ನು ಆಗಾಗ ಬಂದು ವಿಚಾರಿಸಿಕೊಂಡು ಹೋಗುತ್ತಿದ್ದರು. ನಾವಾಗಿ ಅವರನ್ನು ಅಂಗಲಾಚಿ ಬೇಡದಿದ್ದರೂ ಅವರಾಗಿ ಬಂದು ನಮ್ಮೆಡೆಗೆ ಸ್ನೇಹ ಹಸ್ತ ಚಾಚಿದರು. ನಮಗೆ ಯಾವುದೆ ಬಗೆಯ ತೊಂದರೆಯಾಗದಂತೆ ಬಂದೋಬಸ್ತ್ ಮಾಡಿದ್ದರು. ನಮ್ಮ

ಅವರ ನಡುವಿನ ಸ್ನೇಹ ವಿನಿಮಯ ಎಷ್ಟು ಅತಿಯಾಯಿತೆಂದರೆ, ನಮ್ಮ ಹುಡುಗರಿಗೆ ಅವರು ಅಂಕಲ್ ಆಂಟಿಗಳಾಗಿ ಬಿಟ್ಟರು. ಬಯಸಿದಾಗೆಲ್ಲ ಅವರ ಮನೆಗೆಹೋಗಿ ಊಟ, ತಿಂಡಿ, ಚಹಾ ಮಾಡಿಸಿಕೊಂಡು ಉಂಡು ಕುಡಿದು ಬರುತ್ತಿದ್ದರು. ಅವರಿಗೂ ಒಂದೇ ಕಡೆ ಇದ್ದು ಬೇಸರವಾಗಿರುತ್ತೆ. ಹೋಗಿ ಬರುವ ನೆಂಟರು ಪಂಟರು ಅಪರೂಪ. ಹಾಗಾಗಿ ನಮ್ಮಂತಹವರು ಯಾರಾದರು ಸಿಕ್ಕರೆ ಸ್ನೇಹಕ್ಕಾಗಿ ಹಾತೊರೆಯುವುದು ಸಹಜವಾಗಿತ್ತು. ನಮ್ಮ ಹುಡುಗಿಯರಿಗೆ ಅಲ್ಲಿನ ಪೋಲಿ ಹುಡುಗರಿಂದ ತೊಂದರೆಯಾಗುತ್ತಿದೆಯೆಂದು ತಿಳಿದ ಕೂಡಲೇ ಒಂದಿಬ್ಬರು ಲೇಡಿ ಪೋಲಿಸರನ್ನು ನಮ್ಮ ಅಂಗರಕ್ಷಕರಾಗಿ ನೇಮಿಸಿದರು. ಈ ನೆಪದಲ್ಲಿ ನಮ್ಮ ಜೊತೆಗೆ ಪೋಲೀಸ್ ಅಧಿಕಾರಿಯ ಕುಟುಂಬದ ಐದಾರು ಮಂದಿಯಾದರೂ ಊಟಕ್ಕೆ, ತಿಂಡಿಗೆ ಹಾಜರಿರುತ್ತಿದ್ದರು. ಆ ಮಹಿಳ ಪೋಲೀಸರಂತೂ ಟಾಕುಟೀಕಾಗಿ ಬೆಳಗಿನ ಉಪಹಾರ, ಮಧ್ಯಾಹ್ನದ ಊಟ, ರಾತ್ರಿ ಊಟಗಳ ಹೊತ್ತಿಗೆ ಗಂಟೆ ಹೊಡೆದಂತೆ ಹಾಜರಾಗುತ್ತಿದ್ದರು. ಮತ್ತು ಉಂಡು ತಿಂದಾದ ಮೇಲೆ ಇದ್ದಕ್ಕಿದ್ದಂತೆ ಮಾಯವಾಗುತ್ತಿದ್ದರು!!

ಅಂತೂ ಇಂತೂ ಈ ಹೊರೆಯ ಬಳಗವನ್ನು ಹೊತ್ತಿದ್ದಾಯಿತು. ನಾವು ಸಿನಿಮಾ, ಅಲ್ಲ ಅಲ್ಲ ಸಾಕ್ಷ್ಯ ಚಿತ್ರವನ್ನು ನೋಡುವುದರಲ್ಲಿ ತನ್ಮಯರಾಗಿದ್ದಾಗ ಹಾಸ್ಟೆಲಿನಲ್ಲಿ ಗಲಿ ಬಿಲಿ ಪ್ರಾರಂಭವಾಯಿತು. ನಾಜ್ 2 ತನ್ನ ಎರಡನೇ ಭೇಟಿ ಕೊಟ್ಟಿತ್ತು. ಪೋರ್ಟ್ ಬ್ಲೇರಿಗೆ!! ಅದರಲ್ಲಿ ಬೆಂಗಳೂರಿನಿಂದ ಮತ್ತೊಂದು ಪ್ರವಾಸಿ ತಂಡ ಬಂದಿತ್ತು. ಅವರೂ ಕೂಡಾ ನಮ್ಮ ಹಾಗೆ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದರು. ನಾವಿಲ್ಲದ ವೇಳೆಯಲ್ಲಿ ಹಾಸ್ಟೆಲಿಗೆ ಬಂದಿದ್ದ ಅವರಿಗೆ ಹಾಸ್ಟೆಲಿನಮ್ಯಾನೇಜರನಿಂದ ನಮ್ಮ ವಿಷಯವೆಲ್ಲ ತಿಳಿದು ನಮ್ಮನ್ನು ಮಾತಾಡಿಸಲು ಕಾತರರಾಗಿದ್ದರು.

ಅಂಡಮಾನದಲ್ಲಿ ಪೋರ್ಟ್ ಬ್ಲೇರ್‌ನ ಅಬೆರ್‌ಡೀನ್ ಬಜಾರಿನಲ್ಲಿ ಓಡಾಡಿ ಬಂದಾಗ, ಅಲ್ಲಿನ ಜನ ನಮ್ಮ ಬಗ್ಗೆ, ನಮ್ಮ ವಿದ್ಯಾರ್ಥಿಗಳ ಬಗ್ಗೆ ತುಂಬ ಮೆಚ್ಚುಗೆಯ ಮಾತನಾಡಿದ್ದರಂತೆ ! ಆ ಪ್ರದೇಶಕ್ಕೆ ಆ ಪರಿಸರಕ್ಕೆ ನಾವು ಎಷ್ಟು ಪರಿಚಿತರಾಗಿದ್ದೆವೆಂದರೆ, ಅಂಡಮಾನಿನ ಯಾವುದೇ ಬೀದಿಯಲ್ಲಾಗಲಿ, ಯಾವುದೇ ಮೂಲೆಯಲ್ಲಾಗಲೀ, ಅಂಗಡಿ, ಹೋಟೆಲುಗಳಲ್ಲಾಗಲಿ ನಾವು ಕಾಣಿಸಿಕೊಂಡರೆ ಸಾಕು. ಪ್ರತಿಯೊಬ್ಬರೂ ನಮ್ಮನ್ನು ಗುರುತಿಸಿ ಮಾತನಾಡುತ್ತಿದ್ದರು. ನಮಗೆ ಸಹಾಯ ಮಾಡುತ್ತಿದ್ದರು. ಇದೆಲ್ಲವನ್ನೂ ತಿಳಿದುಕೊಂಡಿದ್ದ ಬೆಂಗಳೂರಿನ ಗೆಳೆಯರಿಗೆ ನಮ್ಮ ಜೊತೆಯ ಉಪಯೋಗ ಪ್ರಯೋಜನಗಳನ್ನು ಪಡೆಯಬೇಕೆನಿಸದರೆ ಆಶ್ಚರ್ಯವಿಲ್ಲ!

ಚಿತ್ರ ಮುಗಿಯುವವರೆಗೆ ಸಹನೆಯಿಂದ ಕುಳಿತಿದ್ದು ನಂತರ ಎದ್ದು ಬಂದು ನಮ್ಮೆಲ್ಲರೊಂದಿಗೆ ಕೈ ಕುಲುಕಿ ನಮ್ಮ ಪರಿಚಯ ಮಾಡಿಕೊಂಡರು. ಎಂ.ಇ.ಎಸ್. ಕಾಲೇಜಿನ ಪ್ರತಿಷ್ಠೆ ಕರ್ನಾಟಕಕ್ಕೆ ಪರಿಚಿತವಿದ್ದುದರಿಂದ ನಮ್ಮ ಬಗ್ಗೆ ನಮ್ಮ ಕಾಲೇಜಿನ ಬಗ್ಗೆ ಹೆಚ್ಚಾಗಿ ಏನನ್ನೂ ಹೇಳಿಕೊಳ್ಳಬೇಕಾದ ಅಗತ್ಯವಿರಲಿಲ್ಲ. ರಾತ್ರಿ 12 ಗಂಟೆ ವರೆಗೆ ಹರಟೆ ಮುಂದುವರಿಯಿತು.

## ಸುಂದರ ದ್ವೀಪಗಳ ಸೆರೆಗಿನಂಗಳದಲ್ಲಿ : –

ಅಂಡಮಾನ ಈ ಮೊದಲೇ ಹೇಳಿದಂತೆ ದ್ವೀಪ ಮಾಲೆ : ದ್ವೀಪ ಗುಚ್ಛ : ಮುನ್ನೂರ ಐವತ್ತಕ್ಕೂ ಹೆಚ್ಚಿನ ದ್ವೀಪಗಳ ಸಮುದಾಯು ಇದು, ಆದರೆ ಇವುಗಳಲ್ಲಿ ಮೂರು ನಾಲ್ಕು ದ್ವೀಪಗಳನ್ನು ಬಿಟ್ಟರೆ ಮಿಕ್ಕೆಲ್ಲವೂ ಜನವಸತಿಯಿಲ್ಲದ ಶೂನ್ಯ ಪ್ರದೇಶಗಳಾಗಿವೆ. ಇಂತಹ ದ್ವೀಪಗಳು ಹಲವಾರು ವರ್ಷಗಳಿಂದ ಜನ ವಸಿತಿಯಿಲ್ಲದೆ ದಟ್ಟವಾದ ಕಾಡುಗಳಿಂದ, ಭಯಂಕರ ಜಂತುಗಳಿಂದ ಮತ್ತು ಇನ್ನಿತರೆ ಅಪಾಯುಗಳಿಂದ ಕೂಡಿರುವ ಸಾಧ್ಯತೆ ಇರುವುದರಿಂದ ಜನ ಪ್ರವೇಶಕ್ಕೆ ಅನುಮತಿ ಇಲ್ಲ. ಜನವಸತಿಯ ಮುಖ್ಯ ಭಾಗಗಳೆಂದರೆ ನಾರ್ತ್ ಅಂಡಮಾನ್, ಸೌತ್ ಅಂಡಮಾನ್ ಮತ್ತು ಮಿಡಲ್ ಅಂಡಮಾನ್ – ಇವು ಮೂರೂ ಸೇರಿ ಗ್ರೇಟ್ ಅಂಡಮಾನ್ ಎನಿಸಿಕೊಂಡಿದೆ. ಗ್ರೇಟ್ ಅಂಡಮಾನ್ ಉಷ್ಣವಲಯದ ಕಾಡುಗಳಿಂದಲೂ, ಬೆಟ್ಟ ಗುಡ್ಡಗಳ ಶ್ರೇಣಿಗಳಿಂದಲೂ ಮತ್ತು ಇಕ್ಕಟ್ಟಾದ ಕಣಿವೆಗಳಿಂದಲೂ ಕೂಡಿದ್ದು ಸೊಬಗಿನ ಖನಿಯಂತೆ ತೋರುತ್ತದೆ. ಪೂರ್ವಕ್ಕಿರುವ ಬೆಟ್ಟಗಳಲ್ಲಿ ಸ್ಯಾಡಲ್ ಪೀಕ್ (ಶಿಖರ) 2400 ಅಡಿಗಳ ಅತ್ಯಂತ ಎತ್ತರದ ಶಿಖರವಾಗಿದೆ. ಎತ್ತ ನೋಡಿದರೂ ಸೊಬಗಿನ ಸಿರಿಯ ಸೊಂಪು ಕಂಪುಗಳ ಅವಿಸ್ಮರಣೀಯ ದೃಶ್ಯಲೋಕ ಕಣ್ಣಿಗೆ ಬಿದ್ದುಭಾವ ಪರವಶರನ್ನಾಗಿ ಮಾಡಿಬಿಡುತ್ತದೆ.

ಅಂತಹದರಲ್ಲಿ ಒಂದು ಕಾಲಕ್ಕೆ ಬ್ರಿಟಿಷ್ ಜನಾಂಗ ವಾಸಿಸುತ್ತಿದ್ದ, ರಾಜಕೀಯ ಉದ್ದೇಶಗಳಿಗಾಗಿ ಬಳಸಿಕೊಳ್ಳುತ್ತಿದ್ದ ಕೆಲವು ದ್ವೀಪಗಳನ್ನು ನೋಡಿ ಅದರ ಗತ ವೈಭವದ ಕನಸಿನಲ್ಲಿ ತೇಲಿ ಹೋಗುವ ಅವಕಾಶಕ್ಕೆಂದೆ ಕಾದಿದ್ದೇವು. ಅಲ್ಲದೆ ಪ್ರೇಕ್ಷಣೀಯ ಸ್ಥಳಗಳೇಲ್ಲಾ ಹೆಚ್ಚು ಕಡಿಮೆ ಮುಗಿದಿದ್ದವು. ನಮಗೆ ಇನ್ನು ಉಳಿದದ್ದೆಂದರೆ, ಅಂಡಮಾನ್ ದ್ವೀಪಮಾಲೆಯಲ್ಲಿ ಕೆಲವನ್ನಾದರೂ ನೋಡುವುದು. ಅಲ್ಲಿಗೆ ಹೋಗಲು ಪ್ರತ್ಯೇಕವಾದ ಲಾಂಚ್‌ಗಳ ವ್ಯವಸ್ಥೆಯಿದೆ. ಬುಧವಾರ ಬಿಟ್ಟು ಬೇರೆ ದಿನಗಳಲ್ಲಿ ಬೆಳಿಗ್ಗೆ 9.00 ಗಂಟೆಯಿಂದ 12.00 ರವರೆಗೆ ಈ ಲಾಂಚ್‌ಗಳು 'ರಾಸ್' ಮತ್ತು 'ವೈಪರ್' ದ್ವಿಪಗಳ ನಡುವೆ ಸಂಚರಿಸುತ್ತವೆ. 'ಫೀನಿಕ್ಸ್ ಬೇ ಜೆಟ್ಟಿ' ಯಿಂದ ಇವು ಹೊರಡುತ್ತವೆ.

ತಲಾ ಒಬ್ಬೊಬ್ಬರಿಗೆ 14 ರೂ ಕೊಟ್ಟು ಟಿಕೇಟು ಕೊಂಡು ಮರುದಿನ ಈ ಎರಡೂ ದ್ವೀಪಗಳಿಗೆ ಹೊರಟೆವು. ಇವುಗಳಲ್ಲಿ 'ವೈಪರ್' ದ್ವೀಪವೊಂದು ಪುಟ್ಟ ದ್ವೀಪವಾಗಿದ್ದು ಒಂದು ಕಾಲಕ್ಕೆ ಈ ದ್ವೀಪದಲ್ಲಿನ ಎತ್ತರದ ಹಸಿರು ಗುಡ್ಡದ ಮೇಲೆ ಕೈದಿಗಳನ್ನು ಸರೆಯಿಡುತ್ತಿದ್ದ ಒಂದು ಕಟ್ಟಡವಿದೆಯೇ ಹೊರತಾಗಿ, ಮತ್ತಾವ ಮುಖ್ಯ ನೋಟಗಳಿಲ್ಲ. ಹಿಂದಿನ ದಾರುಣ ಸೆರೆವಾಸದ ಸ್ಮಾರಕವಾಗಿದೆಯೆಂಬ ವೈಶಿಷ್ಟ್ಯವನ್ನು ಬಿಟ್ಟರೆ, ಅದರ ತುಂಬಾ ಈಗ ಕಾಣುವುದು ಕುರಿಗಳ ಹಿಕ್ಕೆಗಳು !! ಆದರೆ ದ್ವೀಪ ಸೌಂದರ್ಯವಂತೂ, ತೂಗಿ ತೊನೆಯುವ ತೆಂಗು ಮತ್ತು ತಾಳೆಗಳ ಸಾಲುಗಳಿಂದ ಇಮ್ಮಡಿಸಿದೆ. ಅಪಾರ ಸಂಖ್ಯೆಯಲ್ಲಿ ಪ್ರವಾಸಿಗಳನ್ನು ಈ ಕಾರಣಕ್ಕಾಗಿಯೇ ಆಕರ್ಷಿಸಿ ಸೆಳೆಯುತ್ತದೆ. ಇಲ್ಲಿ ಜನವಾಸವಿಲ್ಲ. 'ರಾಸ್' ದ್ವೀಪದಲ್ಲಿಯಂತೆಯೆ ಮಧ್ಯಾಹ್ನದ ಮೇಲೆ ಯಾರೂ ಅಲ್ಲಿ ಉಳಿಯುವಂತಿಲ್ಲ.

ವೈಪರ್ ದ್ವೀಪಕ್ಕೆ ಹೋಲಿಸಿದರೆ, ರಾಸ್ ದ್ವೀಪ ಗತ ಇತಿಹಾಸದ ದೃಷ್ಟಿಯಿಂದ ಮತ್ತು ಸ್ವಚ್ಛ ದಂಡೆಗಳಿಂದ, ಭೋರ್ಗರೆದು, ಸುಳಿಸುಳಿದು, ನೊರೆ ನೊರೆಯಾಗಿ ಬರುವ ಅಲೆಗಳ ಕುಣಿತದಿಂದ, ಪ್ರಶಾಂತತೆಯಿಂದ, ಭಾವನಾ ಪರವಶತೆಗೆ ತಳ್ಳುವಂತಿದೆ. ಇವೆಲ್ಲವೂ ಮನುಷ್ಯ ಸಂಪರ್ಕದಿಂದ ದೂರವಿರುವುದರಿಂದ ಪರಿಶುದ್ಧವಾಗಿದೆ.

'ರಾಸ್' ದ್ವೀಪದ ಇತಿಹಾಸವನ್ನು ಕೇಳಿದರೆ ಆಶ್ಚರ್ಯ ದಿಗ್ಭ್ರಮೆಗಳಾಗುತ್ತವೆ. ಬ್ರಿಟಿಷರು ಪೋರ್ಟ್ ಬ್ಲೇರನ್ನು ಆವಾಸಕ್ಕಾಗಿ ಆರಿಸಿ ಕೊಂಡಾಗ, ಪೋರ್ಟ್‌ಬ್ಲೆರಿನಿಂದಾಚೆಗೆ ಇರುವ 200 ಎಕರೆ ವಿಸ್ತಾರವುಳ್ಳ ಈ ಸಣ್ಣ ದ್ವೀಪವನ್ನು ತಮ್ಮ ಸ್ವಂತವಾಸಕ್ಕಾಗಿ, ರಕ್ಷಣೆಗಾಗಿ ಆರಿಸಿಕೊಂಡರು. ಪುಟ್ಟ ಪುಟ್ಟ ಖಾರಿಗಳಿಂದ, ಕೊರಕಲುಗಳಿಂದ ಕೂಡಿದೆ. ದಂಡೆಗಳಿಂದ, ಆವೃತವಾದ ಮತ್ತು ಮನೋಹರವಾದ ಅಚ್ಚ ಹಸುರಿನಗುಡ್ಡಗಳಿಂದ ಆಲಂಕೃತವಾದ ಈ ದ್ವೀಪದಲ್ಲಿ ಬ್ರಿಟಿಷರು ತಮಗೆ ಬೇಕಾದ ಎಲ್ಲ ವ್ಯವಸ್ಥೆಗಳನ್ನು (ಅನುಕೂಲಗಳನ್ನು) ಹೊಂದಿಸಿಕೊಂಡಿದ್ದರು. ಅವರ ಅಭಿರುಚಿ, ಅನುಕೂಲಗಳಿಗೆ ಅನುಗುಣವಾಗಿ ಬಂಗಲೆಗಲು, ಚರ್ಚುಗಳು, ಕ್ಲಬ್ಬುಗಳು, ಗ್ರಂಥಾಲಯ, ಈಜು ಕೊಳ, ಟೆನ್ನಿಸ್ ಕೋರ್ಟ್, ಕಣಜಗಳು, ಸಿಪಾಹಿಗಳಿಗಾಗಿ ವಾಸದ ಮನೆಗಳು –ಇತ್ಯಾದಿಯಾಗಿ ಸಕಲ ಸೌಲಭ್ಯಗಳ ಜೊತೆಗೆ ಸೂರ್ಯ ಸ್ನಾನ, ಸಮುದ್ರ ಸ್ನಾನಗಳಿಗೆ ಪ್ರತ್ಯೇಕ ಸೌಲಭ್ಯದಂತಿರುವ ಸಮುದ್ರ ತೀರಗಳು – ಬ್ರಿಟಿಷರ ಶ್ರೀಮಂತ ಬದುಕಿನ ನಿರೀಕ್ಷೆಗಳಿಗೆ ಪೂರಕವಾಗಿದ್ದವು, ವೈಭವದ ಬದುಕಿನ ಶೈಲಿ ಮತ್ತು ವಸಾಹತು ಶಾಹಿ ಆಡಳಿತದಿಂದ ಗಳಿಸಿಕೊಂಡ ವಿಶಿಷ್ಟ ಅಧಿಕಾರಕ್ಕೆ ದ್ಯೋತಕವಾಗಿ ಈ ದ್ವೀಪವು ರೂಪಾಂತರ ಗೊಂಡಿತು.

ಅವರ ಪಾಲಿಗೆ ರಾಸ್ ದ್ವೀಪ 'ಭೂಸ್ವರ್ಗ' ವಾಗಿತ್ತು. ಈ ದ್ವೀಪದಿಂಲೇ ಅಂಡಮಾನದ ಆಡಳಿತವನ್ನು ನಡೆಸಿದರು. ಸುಮರು 50 ವರ್ಷಗಳ ಕಾಲದ ಅವರ ಆಡಳಿತ, 1941 ರಲ್ಲಿ ಉಂಟಾದ ಭೂಕಂಪ ಮತ್ತು 1941 ರಲ್ಲಿ ಉಂಟಾದ ಭೂಕಂಪ ಮತ್ತು 1942 ರ ಎರಡನೆ ಜಾಗತಿಕ ಯುದ್ಧದ ಪರಿಣಾಮವಾಗಿ, ಸಾಕಷ್ಟು ವಿನಾಶವನ್ನು ಕಂಡಿತು. ಈ ದ್ವೀಪದ ನಿರ್ಮಾಣ 200 ಮಂದಿ ಕೈದಿಗಳ ಶ್ರಮದಾನದಿಂದ ಸಾಧ್ಯವಾಯಿತು. ತಮ್ಮ ವೈಯಕ್ತಿಕ ಕೆಲಸಗಳಿಗಾಗಿ ಈ ಕೈದಿಗಳನ್ನು ಸಾಕಷ್ಟು ಬಳಸಿಕೊಳ್ಳುತ್ತಿದ್ದರು. 1942 ರಲ್ಲಿ ಜಪಾನೀಯರು ಈ ದ್ವೀಪವನ್ನು ವಶಪಡಿಸಿಕೊಂಡರು. ಎಷ್ಟೋ ಆಸೆ, ಆಕಾಂಕ್ಷೆಗಳಿಂದ ಕಟ್ಟಿದ ಈ ದ್ವೀಪವನ್ನು ಬಿಟ್ಟೋಡಿದ ಬ್ರಿಟಿಷರು ಮತ್ತೆಂದೂ ಸುಳಿಯಲಿಲ್ಲ – ಸ್ವಾತಂತ್ರ್ಯ ನಂತರ ಭಾರತ ಸರಕಾರದ ಆಡಳಿತಕ್ಕೆ ಒಳಪಟ್ಟಿತು.

ಆದರೆ ಈ ದ್ವೀಪ ಕಳೆದುಕೊಂಡ ಗತ ವೈಭವವನ್ನು ಮತ್ತೆ ಪಡೆಯಲಾಗಲಿಲ್ಲ. ಉಷ್ಣ ಪ್ರದೇಶದ ಸಸ್ಯ ಜಾತಿಗಳು ಈ ನಾಲ್ಕು ದಶಕಗಳಲ್ಲಿ ದಟ್ಟವಾಗಿ ಬೆಳೆದು ಆಕ್ರಮಿಸಿದೆ. ಅಡೆ ತಡೆಯಿಲ್ಲದಂತೆ ಮಳೆ ಪ್ರದೇಶದ ಕಾಡುಗಳು, ಕಟ್ಟಡಗಳಲ್ಲಿನ ಕಲ್ಲುಗಳನ್ನು ಸೀಳಿಕೊಂಡು ಬೆಳೆ ಬೆಳೆದು ಅಡ್ಡಾ ದಿಡ್ಡಿಯಾಗಿ ಬಿಳಲುಗಳನ್ನು ಎಲ್ಲೆಂದರಲ್ಲಿ ಇಳಿಸಿ, ಅತ್ಯಂತ ಎತ್ತರದ ಈ ಕಟ್ಟಡಗಳು ಕುಸಿದು ಬೀಳದಂತೆ ಆಧಾರ ಒದಗಿಸಿವೆ. ಈಗಲೋ ಆಗಲೋ ಬೀಳುವಂತಿರುವ ತೊಲೆಗಳು ಗಾಳಿಯಲ್ಲಿ, ಈ ಮರಗಳ ಶಾಖೆಗಿಂತಲೂ, ಕೆಲವು ಕಾಡು

ಬಳ್ಳಿಗಳಿಂದಲೂ ಹೇಗೋ ತೂಗಾಡುತ್ತಿವೆ. ಇಲ್ಲಿ ಮನುಷ್ಯ ಸಂಚಾರವಿಲ್ಲ. ಕೇವಲ ನೆನಪಿನ ಭೂತಗಳು ಮಾತ್ರವೆ ಅಂಡಲೆಯುತ್ತವೆ! ನಿರ್ಜನ ನಿಸರ್ಗದ ಗಭೀರ ಸೌಂದರ್ಯದ ಪರಿಸರದಲ್ಲಿ ಆಗೊಮ್ಮೆ ಈಗೊಮ್ಮೆ ಜಿಂಕೆಗಳು, ನವಿಲುಗಳು ತಮ್ಮ ತಮ್ಮ ಸಹಜ ಚಂಚಲತೆ, ರಾಜ ಗಾಂಭೀರ್ಯಗಳಿಂದ ಮುಕ್ತವಾಗಿ ಓಡಾಡುತ್ತವೆ. ಸೂರ್ಯನ ಬೆಳಕಿನಲ್ಲಿ ನೀಲ ಬಾನಿನ ಛಾವಣಿಯಡಿಯಲ್ಲಿ, ನೀಲ ಗಂಭೀರ ಕಡಲ ತಟಿಯಲ್ಲಿ ನವಿಲುಗಳ ಆ ವರ್ಣ ವೈಭವವನ್ನು ನೋಡುವುದೆ ಕಣ್ಣಿಗೊಂದು ಹಬ್ಬ!!

ಜಲಾಂತರ್ಜಗತ್ತಿನ ಅದ್ಭುತ ಸಿರಿಯನ್ನು ನೊಡಬೇಕಾದರೆ ಅನಿರ್ವಾಸಿತ ದ್ವೀಪಗಳಾಧ ಜಾಲಿ ಬಾಯ್, ರೆಡ್ ಸ್ಕಿನ್ ಮತ್ತು ಸಿಂಕ್ ಮೊದಲಾದ ದ್ವೀಪಗಳಿಗೆ ಹೋಗಬೇಕು. ಸ್ಫಟಿಕದಂತಹ ಪರದರ್ಶಕ ನೀರಿನ ಪದರಗಳ ಮೂಲಕ ಬಣ್ಣ ಬಣ್ಣದ ಹವಳ ಬಳ್ಳಿಗಳು, ಬಗೆ ಬಗೆಯ ಮೀನುಗಳು ಕೈಗೆಟುಕುವಂತೆಯೇ, ಗಾಜಿನ ತಳದ ದೋಣಿಯಿಂದ ಕಾಣುತ್ತದೆ.

ನೂರಾರು ದ್ವೀಪಗಳ ಸೌಂದರ್ಯ ಸಿರಿ ಕೆಲವನ್ನು ಹೊರತು ಪಡಿಸಿದರೆ, ಅಲಭ್ಯವಾಗಿದೆ. ಮನುಷ್ಯ ಮಾತ್ರರಿಗೆ ಈ ದ್ವೀಪಗಳಿಗೆ ಪ್ರವೇಶ ಇನ್ನೂ ಅಸಾಧ್ಯವಾಗಿದೆ.

ಅಂಡಮಾನವೊಂದು ನಿಜವಾಗಿಯೂ ಎಲ್ಲರೂ ಬಣ್ಣಿಸುವಂತೆ ಜೀವಂತ ವಸ್ತು ಸಂಗ್ರಹಾಲಯ: ಅದ್ಭುತ ರಮ್ಯ ಪ್ರಕೃತಿಯ ಕಲಾಕೇಂದ್ರ.

ಸಂಕ್ಷೇಪವಾಗಿ ಹೇಳುವುದಾದರೆ ಇದೊಂದು, ದಿಗ್ಭ್ರಾಂತಗೊಳಿಸುವ ಮಾಯಾಲೋಕ.

ನಮಗರಿವಿಲ್ಲದಂತೆ ದಿನಗಳು ಸರಿದು ಹೋದವು. ಇನ್ನೆರಡು ದಿನಗಳಲ್ಲಿ ಈ ಸುಂದರ ದ್ವೀಪದಿಂದ ಬೀಳ್ಕೊಳ್ಳಬೇಕು, ನೆನಪು ಬಂದರೆ ಸಾಕು, ಮನಸ್ಸು ಚಡಪಡಿಸುತ್ತದೆ. ಒಂದಷ್ಟು ದಿನ ಬೆಂಗಳೂರಿನ ಕಲುಷಿತ ವಾತಾವರಣದಲ್ಲಿ ಹಳಸಲು ಯಾಂತ್ರಿಕ ಬದುಕಿನಲ್ಲಿ ಉಸಿರುಗಟ್ಟಿ ಸಾಯುವ ಹಿಂಸೆಯಿಂದ ದೂರವಾಗಿ, ಯಾವುದೋ ದಿಗಂತದಾಚೆಗಿನ ರಮಣೀಯ ಜಗತ್ತಿನ ಹಿತದ ನೆರಳಿನಲ್ಲಿ ಕ್ಷಣ ಕ್ಷಣಕ್ಕೂ ಸ್ವರ್ಗ ಸುಖಾನುಭೂತಿಯನ್ನೆ ಪಡೆಯುತ್ತಿದ್ದ ನನಗೆ ಬೆಂಗಳೂರಿಗೆ ಮರಳುವುದೆ ಬೇಡವೆನಿಸಿತ್ತು. ಆದರೆ ಇಲ್ಲಿಂದ ನನ್ನನ್ನು ಸುತ್ತಿಕೊಂಡಿರುವ ಎಳೆತಗಳನ್ನು ಬಿಡಿಸಿಕೊಂಡು ಉಳಿಯುವುದಾದರೂ ಹೇಗೆ? (ಅಲ್ಲಿದೆ ನಮ್ಮ ಮನೆ ಇಲ್ಲಿರುವುದು ಸುಮ್ಮನೆ – ಎಂಬ ದಾಸರ ಹಾಡೊಂದು ಪಿಸುಗುಟ್ಟಿತು, ನನ್ನ ಕಿವಿಗಳಲ್ಲಿ!!)

### ಹೊರಡುವ ಸಿದ್ಧತೆಯಲ್ಲಿ:–

ಎರಡೇ ಎರಡು ದಿನಗಳು ಉಳಿದಿದ್ದವು. ನಮ್ಮ ಉದ್ದೇಶ ಸಾರ್ಥಕವಾಗಿ ಪೂರೈಸಿತ್ತು. ನಾವು ಸಂಗ್ರಹಿಸಿದ್ದ ಸ್ಪೆಸಿಮನ್‌ಗಳನ್ನು ಹಾಸ್ಟೆಲಿಗೆ ತಂದು ಸಂಸ್ಕರಿಸಿ, ಜಾತಿ ವರ್ಗಕ್ಕನುಗುಣವಾಗಿ ವಿಂಗಡಿಸಿ ಬೇರೆ ಬೇರೆಯಾಗಿ ಪ್ಲಾಸ್ಟಿಕ್ ಚೀಲಗಳಲ್ಲಿ ಸ್ವಲ್ಪ ಫಾರ್ಮಲಿನ್ ಹಾಕಿ ಭದ್ರಗೊಳಿಸಲು ದಾರ ಬಿಗಿದು ಸಾಲಗಿ ಜೋಡಿಸಿದರು. ಹತ್ತು ದಿನಗಳಿಂದ

ಒಣಗಲು ಹರವಿದ್ದರು. ಹಾಸ್ಟೆಲಿನಲ್ಲಿದ್ದ ಬೇರೆಯವರು, ವಾಸನೆ ಬರುತ್ತದೆಂದು ದೂರಿದರು. ಅವರಿಗೆ ಹೇಗೋ ಸಮಾಧಾನ ಮಾಡಿ ಅವುಗಳನ್ನೆಲ್ಲ ಹುಡುಗಿಯರ ಬಾತ್ ರೂಮ್ ಹಿಂದೆ ಇದ್ದ ಖಾಲಿ ಜಾಗಳದಲ್ಲಿ ಸುರಿದರು. ಹರವಿ ಸುರುವಿದ್ದ ಅವುಗಳನ್ನು ನೋಡಿದಾಗ ಸಮುದ್ರ ಸಂಪತ್ತನ್ನು ಸಾಕಷ್ಟು ಕೊಳ್ಳೆ ಹೊಡೆದು ತಂದಿದ್ದಾರೆನಿಸಿತು! ಅವರು ತಂದದ್ದು ಒಮದೇ ಎರಡೇ – ಕಪ್ಪೆ ಚಿಪ್ಪು, ಕವಡೆ, ಶಂಖಗಳು, ಹವಳ ಬಳ್ಳಗಳು, ಬಗೆ ಬಗೆಯ ಮೀನುಗಳು, ನಳ್ಳಿಗಳು, ಕಡಲ ಪುಷ್ಪ, ಕಡಲ ಸೌತೆ, ಬಸವನ ಹುಳುಗಳು ... ಹೀಗೆ ಒಂದಲ್ಲ ಎರಡಲ್ಲ.. ತಂದು ತಂದು ರಾಶಿ ಒಡ್ಡಿದ್ದರು. ಅಲ್ಲಿಯೆ ಒಂದು ದಿಢೀರ್ ವಸ್ತು ಸಂಗ್ರಹಾಲಯ ನಿರ್ಮಾಣಗೊಂಡಂತೆನಿಸಿತು. ಕಾಲೇಜಿನ ಲ್ಯಾಬ್‌ಗೆಂದು ಸಂಗ್ರಹಿಸಿದ್ದರೂ ಹುಡುಗಿಯರು ಅವುಗಳಲ್ಲಿ ಸುಂದರವಾದ ಹವಳದ, ಬಗೆ ಬಗೆಯ ಕೊಂಬೆಗಳನ್ನು ಭದ್ರವಾಗಿ ಸುತ್ತಿ ಸೂಟ್ ಕೇಸುಗಳಲ್ಲಿ ಅಡಗಿಸಿಟ್ಟಿದ್ದರು! ಒಬ್ಬರಿಂದೊಬ್ಬರಿಗೆ ತಿಳಿದು ನಮ್ಮ ವರೆಗೂ ತಲುಪಿತು.

ನನ್ನ ಗೆಳತಿ ಬೈದು ಅವುಗಳನ್ನೇಲ್ಲಾ ಹೊರಗೆ ಇರಿಸಿದಳು. ಹೊಟ್ಟೆ ತೊಳೆಸುವಂತಹ ವಾಸನೆ! ಅವುಗಳನ್ನು ಚೆನ್ನಾಗಿ ಒಣಗಿಸಿ ಕೆಲವು ದ್ರಾವಕಗಳನ್ನು ಹಾಕಿ ಭದ್ರಪಡಿಸಬೇಕು ಹೊರತು ಹೀಗೆಲ್ಲಾ ಅಲ್ಲ –ಎಂದು ಬೈದು ಬುದ್ಧಿ ಹೇಳಿದಳು. ಜೊತೆಗೆ ಕಾಲೇಜಿಗೆ ಕೊಟ್ಟು ಉಳಿದಿದ್ದನ್ನು ಮಾತ್ರವೇ ವೈಯಕ್ತಿಕವಾಗಿ ತೆಗೆದಿಟ್ಟುಕೊಳ್ಳಬೇಕೆಂದಳು. ಚಕಾರವೆತ್ತದೆ, ಉಳಿದವರೆಲ್ಲರೂ ಪೆಟ್ಟಿಗೆಗಳೊಳಗಿಂದ ಹೊರಗೆ ತೆಗೆದಿರಿಸಿದರು.

ನಿಸರ್ಗ ಸಂರಕ್ಷಣಾಧಿಕಾರಿಗಳಿಂದ ಟ್ರಾನ್ಸಿಟ್ ಪರ್ಮಿಟ್ ಅನ್ನು ಗಳಿಸಿದ್ದಾಯಿತು. ನಮ್ಮ ನಮ್ಮ ಷಾಪಿಂಗೂ ಮುಗಿದಿತ್ತು. ಹೊತ್ತು ಹೋಗಿದ್ದ ಹಣವೆಲ್ಲವೂ ಕರಗಿ ಹೋಗಿತ್ತು. ಇನ್ನೊಂದೆರಡು ದಿನ ಉಳಿದರೂ ಊಟ ತಿಂಡಿಗಳಿಗೆ ಕ್ಷಾಮವಂತೂ ಕಟ್ಟಿಟ್ಟದ್ದು!!!!

ಎಲ್ಲ ಸಿದ್ಧತೆಗಳಾದರೂ, ನಮ್ಮೊಳಗಿನ ಭಯ, ಕಾತರಗಳು ಕ್ಷಣ ಕ್ಷಣಕ್ಕೆ ಇಮ್ಮಡಿಸಿದವು. 26ನೇ ನವೆಂಬರ್ ಹೊರಡಬೇಕಾಗಿದ್ದ ಹಡಗು ಹೊರಡುವ ಸೂಚನೆಗಳು ಬರಲಿಲ್ಲ. ಉಮಾರು 8–10 ದಿನಗಳಿಂದ ನಿಲ್ಲದ ದರಿದ್ರ ಮಳೆ, ಪ್ರಚಂಡಗಾಳಿ, ಮುಸಲ ಧಾರೆ – ಇದರಿಂದ ಉಂಟಾದ ಉತ್ಪತಗಳು ಅಷ್ಟಿಷ್ಟಲ್ಲ!! ಮನೆ ಹೆಂಚುಗಳು ಹಾರಿದವು; ಕಿಟಕಿ ಗಾಜುಗಳೊಡದವು. ಹಳೆ ಕಟ್ಟಡಗಳು ಉರುಳಿದವು. ಮರಗಳು ಕಡಿಮೆ ನೆಲ ತಾಕಿದವು. ವಿದ್ಯುತ್ ಕಂಬಗಳು, ತಂತಿಗಳು ಕಡಿಮೆ ಬಿದ್ದವು ಅಂಡಮಾನವನ್ನೆಲ್ಲಾ ಅಂಧಕಾರ ಕವಿಯಿತು. ಪ್ರಚಂಡ ವೇಗದ ಬಿರುಗಾಳಿಯೆದ್ದು ಬಂಗಾಳ ಸಮುದ್ರವನ್ನು ಕಲಕಿತು. ಪ್ರಲಯ ಕಾಲದ ಕಡಲುಬ್ಬರದಲೆಗಳು ಬೆಟ್ಟದಷ್ಟು ಎತ್ತರವೆದ್ದು ದಂಡೆಗಪ್ಪಳಿಸಿ, ಅಪ್ಪಳಿಸಿ, ರಸ್ತೆಯ ಬದಿಗಿನ ಗೋಡೆಯನ್ನು ಉರುಳಿಸಿ, ರಸ್ತೆಗೂ ನುಗ್ಗಿದವು ಅಲೆಗಳು!!

ಆ ಭಯಂಕರ ವಾಸ್ತವಾನುಭವದ ನಡುವೆಯೂ ನನಗೆ ಗೋಕಾಕಾರ 'ಸಮುದ್ರ ಗೀತೆಗಳು' ಕವನ ಸಂಕಲನದ ಕವಿತೆಗಳು ನೆನಪಾದವು. ಸಮುದ್ರವನ್ನು, ಅದರ ಜೀವ ಸ್ಥಿತಿ, ಮನೋವ್ಯಾಪಾರಗಳೊಂದಿಗೆ ಎಷ್ಟು ವರ್ಣಿಸಿದರೂ ತಣಿದಂತೆ ಕಾಣಿಸಲಿಲ್ಲ. ಅಗಾಧ ನೀಲ ಜಲರಾಶಿ, ಬೆಟ್ಟದೆತ್ತರವೇಳುವ ಅಲೆಗಳ ಭೂಮ ಸೌಂದರ್ಯ, ದಿಗಂತಗಳನ್ನೆ

ನಡುಗಿಸುವ ಅದರ ಅಬ್ಬರ ಘೋಷ – ಕವಿಯ ಕಣ್ಮುಂದೆ ಚಿತ್ರಗಳ ಸರಮಾಲೆಯನ್ನೆ ಸೃಷ್ಟಿಸಿರಬೇಕೆನಿಸಿತು. ಸಮುದ್ರದ ಆಳ, ಅಗಲಗಳು, ಅದರ ಭೂಮ ಭವ್ಯ ವ್ಯಕ್ತಿತ್ವವನ್ನು ಅರಿವ ಸಾಹಸ ಯಾರಿಗಿದೆ? ಅಳಿವು–ಉಳಿವು, ಹುಟ್ಟು – ಸಾವು, ನೋವು–ನಲಿವು – ಇತ್ಯಾದಿ ದ್ವಂದ್ವಗಳ ಆಗರ. ಸುಮಧುರ ಸೌಂದರ್ಯ ರುದ್ರ ಸೌಂದರ್ಯ! ಅದರ ಬಣ್ಣನೆಗೆ ಮನುಷ್ಯನ ಅಳವು ಸಾಲದು. ಆದ್ದರಿಂದಲೆ ಸಮುದ್ರವನ್ನು ಸಂಬೋಧಿಸುತ್ತಾ ಗೋಕಾಕರು – **"ಶಾಂತಿಯಿಲ್ಲ, ಕ್ಷೋಭೆಯಿಲ್ಲ ನಿನಗೆ! ಶಾಂತಿಯಿದೆ, ಕ್ಷೋಭೆಯಿದೆ ನಿನಗೆ! ಮಾನವನಂತೆ, ಸಮಾಧಾನ ರಹಿತ! ದೇವನಂತೆ ಶಾಂತಿ ಪೂರಿತ ಭದ್ರ ರುದ್ರ ನಿರುವೆ ನೀನು ಸಮುದ್ರ ರಾಜ!"** –ಎಂದು ಸಂಭ್ರಮಿಸಿ ನುಡಿದಿದ್ದಾರೆ. ಸಮುದ್ರದ ಅದ್ಭುತ ಅದಮ್ಯ ಶಕ್ತಿಯನ್ನು ಕಂಡು ರುದ್ರ ಪುರುಷ, ಮಾರುತಿ ಬಲ ಭೀಮ, ತ್ರಿಪುರಾಂತಕ, ಎಂದು ಕೀರ್ತಿಸುವುದರ ಜೊತೆಗೆ ತಾಂಡವ ನೃತ್ಯ, ಪ್ರಚಂಡ ಕೋಲಾಹಲಗಳನ್ನು ಸೃಷ್ಟಿಸುವ, ನಟ ಸಾಮ್ರಾಟ ಎಂದು ಕರೆದಿರುವುದು ಸಾರ್ಥಕವೆನಿಸಿತು. ಕಿನ್ನರ ಕಿಂಪುರುಷರ ನೌಕೆಗಳಂತೆ ಹೆಡೆಯಲ್ಲಿ ಪುಷ್ಪ ರಾಗವಿಹ ಕಾಳ ಸರ್ಪಗಳಂತೆ ಕಾಣುವ ಸಾವಿರಾರು ತೆರೆಗಳ ವೈಭವದ ಲೀಲೆ ಕವಿಯ ಪ್ರತಿಭೆಯ ಕಣ್ಣನ್ನು ತೆರೆಸಿದ್ದರೆ ಆಶ್ಚರ್ಯವಿಲ್ಲ. ಬೆಳಗು, ಸಂಜೆ, ರಾತ್ರಿಗಳಲ್ಲಿ ಸಾಗರ ಗಾಂಭೀರ್ಯ ಅಸಂಖ್ಯ ಭಾವರಾಗಗಳನ್ನು ಮಿಡಿಸುತ್ತದೆ. ಅದ್ಭುತ ರೊಮಾಂಚಕಕಾರಿ ದೃಶ್ಯಗಳನ್ನು ಮನೋ ನೇತ್ರದ ಪರದೆಯ ಮೇಲೆ ಬಿಡಿಸುತ್ತದೆ. ನಿಜವಾಗಿಯೂ ಸಮುದ್ರದ ಮಹಾಘನತೆಯ ಮುಂದೆ ಮನುಷ್ಯ ಕೇವಲ 'ಬರಿಪಿಳ್ಳಿ, ನೀರ್ಗುಳ್ಳಿ' ಎಂದು ಕವಿಗೆ ಅನಿಸಿರುವುದು ವಿಶ್ವ ಸತ್ಯ. 'ಯೋಚಿಸಿದಷ್ಟು ಮನಸು ಗಂಭೀರವಾಗತೊಡಗಿತ್ತು. ನನ್ನ ಕನಸಿನ ಲೋಕ ಮುರಿದು, ವಾಸ್ತವದ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದೆ. ಆದರೆ ಸಮುದ್ರ ನನ್ನನ್ನು ಮತ್ತೆ ಮತ್ತೆ ಕಾಡತೊಡಗಿತ್ತು. ಕವಿ ಚಿತ್ರಣದ ಆಸ್ವಾದನೆ, ನಿಜ ಸಂದರ್ಭದ ಮುಖಾಮುಖಿ ಅನುಭವಗಳು ಬೇರೆ ಬೇರೆಯಾಗಿದ್ದವು!!

ಕಡಲ ಗಂಭೀರ ಪ್ರಶಾಂತತೆಯನ್ನು ಕಂಡಿದ್ದ ನನಗೆ ಈಗ ಅದರ ಭೀಷಣ ಕೋಪದ ಕ್ರೌರ್ಯವನ್ನು ನೋಡಿ ದಿಗ್ಭ್ರಮೆಯಾಯಿತು. ಇಂತಹ ಪ್ರಚಂಡ ಪರಿಸ್ಥಿತಿಯಲ್ಲಿ ಏನಾಗುವುದೊ ಎನಿಸಿತು. ತೀರಾ ಅವಶ್ಯಕವೆನಿಸಿದ ಓಡಾಟ ಬಿಟ್ಟರೆ ರಸ್ತೆಗಳಲ್ಲಿ ಕಾಣುತ್ತಿದ್ದುದ್ದು, ನುಗ್ಗಿ ಹರಿವ ಮಳೆ ನೀರಿನ ಹೊಳೆಗಳು, ಗುಡುಗು ಸಿಡಿಲುಗಳಬ್ಬರವನ್ನೂ ಮೀರಿ ಕಿವಿಗಪ್ಪಳಿಸುತ್ತಿದ್ದ ಸಮುದ್ರ ಘೂರ್ಮಿಕೆ!

ರಾತ್ರಿಗಳಲ್ಲಿ ನಿದ್ದೆಯೆ ಅಪರೂಪವಾಯಿತು. ಕಾತರ, ಕಳವಳ, ಉಮ್ಮಳ, ಉದ್ವಿಗ್ನತೆಗಳು, ಒಂದೆಡೆಯಾದರೆ, ಹಾಸ್ಟೆಲಿಗೆ ಹತ್ತಿರದ ಅಬೆರ್‌ಡೀನ್ ದಂಡೆಯಿಂದ ಕೇಳಿಬರುತ್ತಿದ್ದ ಅಲೆಗಳಬ್ಬರಗಳು ಹಾಸ್ಟೆಲ್ ಸುತ್ತಲಿನ ತೋಟದೊಳಗೆ ಅಲ್ಲಲ್ಲಿ ಅವಿತುಕೊಂಡು ಭಯದಿಂದ ಅರಚುತ್ತಿದ್ದ ಕಪ್ಪೆಗಳ ವಟ ವಟ – ಟರ್ರ ಟರ್ರ –ಟರ್ರ ! ಇದರ ಜೊತೆಗೆ ಸಾಲದೆಂಬಂತೆ ಸೊಳ್ಳೆಗಳ ಶಬ್ದ ಮತ್ತು ಕಾಟ ಬೇರೆ!! ಕಣ್ಣು ಮುಚ್ಚಿದರೆ ಬೆಚ್ಚಿ ಬೀಳುತ್ತಿದ್ದೆ. ಅಂಡಮಾನ ಪ್ರವಾಸದ ನಲಿವು ಗೆಲುವುಗಳು ಬಾಡ ಹತ್ತಿದವು.

ಕೇವಲ ಒಂದೇ ಒಂದ ದಿನವಿದೆ, ಹೊರಡಲು ಎಂದಾಗ, ರಾತ್ರಿ ಮಲಗುವಾಗ ಮೇಣದ ಬತ್ತಿಯ ಮಂದ ಬೆಳಕಿನಲ್ಲಿ ಲೀಲಾಗೆ ಹೇಳಿದೆ – "ಲೀಲಾ ಏನು ಮಾಡುವುದೇ?

ಪರಿಸ್ಥಿತಿ ನೋಡಿದರೆ ಹಡಗು ಹೊಡುವಂತಿಲ್ಲ. ಬಿರುಸು ಮಳೆ, ಬಿರುಗಾಳಿಗಳಲ್ಲಿ ಹೊರಡುವುದೂ ಕೂಡ ಅಪಾಯವೆ! (ನನಗೆ ಆಗಲೇ ಭಯ ಶುರುವಾಗಿತ್ತು. ಹಡಗು ಹೊರಡಬಾರದೆಂದೆ ನನ್ನ ಅಂತರಂಗದ ಹಾರೈಕೆಯಾಗಿತ್ತು) ಮನೆಯವರು ಇಲ್ಲಿನ ಸುದ್ದಿ ಟಿ.ವಿ. ಸಮಾಚಾರ ಪತ್ರಗಳಿಂದ ಕೇಳಿರುತ್ತಾರೆ. ಅವರಿಗೆಲ್ಲಾ ಭಯವಾಗಿ ಹೋಗಿರುತ್ತೆ.. ನಿನಗೇನು ಅನಿಸುತ್ತೆ, ನಾಳೆ ಹಡಗು ಹೊರಡುತ್ತೊ ಇಲ್ಲೋ?" – ಸಂಶಯದಿಂದ ಕೇಳಿದೆ.

'ಯಾಕೆ ಯೋಚನೆ ಮಾಡ್ತಿ, ಮಲಕ್ಕೋ, ನಾಳೆಗೆ ಎಲ್ಲಾ ಶಾಂತವಾಗುತ್ತೆ. ಬೆಳಿಗ್ಗೆ ಬೇಗ ಬೇರೆ ಏಳ್ಬೇಕು. 9.00 ಗಂಟೆಗೆ ಹಡಗು ಹೊರಡೋದರಿಂದ 7.30ಕ್ಕೆ ನಾವು ರಿಪೋರ್ಟ್ ಮಾಡಿಕೊಳ್ಳಬೇಕು' – ಎಂದಳು.

'ಐ ಡೊಂಟ್ ತಿಂಕ್, ಈ ಸಲ ನಮ್ಮ ಹಡಗು ಪ್ರಯಾಣ ಬರುವಾಗ ಇದ್ದ ಹಾಗೆ ಇರುತ್ತೇಂತ ! ಕಲ್ಕತ್ತಾದ 'ಹರ್ಷ' ಕ್ಯಾನ್ಸಲ್ ಆಗಿರುವುದರಿಂದ ವಿಪರೀತ ರಷ್ ಇರುತ್ತೆ. ನಮಗೆ ಜಾಗವೂ ಸಿಗುವುದು ಅನುಮಾನವೆ! ದರಿದ್ರದವರು, ಸೀಟುಗಳಿಗೆ ನಂಬರುಗಳನ್ನಾದರೂ ಕೊಡಬೇಡವೇ?' – ಎಂದು ದೂರಿದೆ.

ಬರುವಾಗ ಇದ್ದಷ್ಟು ಅನುಕೂಲ ಹೊರಡುವಾಗ ಇರಲಾರದೆನ್ನುವುದು ಟಿಕೇಟು ಕೊಳ್ಳುವಾಗಲೆ ತಿಳಿಯಿತು. ಟಿಕೇಟುಗಳ ಮೇಲೆ ಹಚ್ಚಲು ಪ್ರತಿಯೊಬ್ಬರ ಭಾವಚಿತ್ರಗಳು ಬೇಕೇ ಬೇಕೆಂದು ಹಟ ಹಿಡಿದರು. ಬರುವಾಗ ಅದನ್ನು ಯಾರೂ ಒತ್ತಾಯಿಸಿ ಕೇಳಿರಲಿಲ್ಲ. ಆದರೆ ಇಲ್ಲಿನ ನಿಯಮಗಳು ಬಹಳ ಕಡಿದು. ಹಾಗಾಗಿ ನಮ್ಮ ಪ್ರಾರ್ಥನೆ ಯಾರಿಗೂ ಕೇಳಿಸದೆ ಹೋಗಿ ಅರ್ಜೆಂಟಾಗಿ ಒಂದು ಸ್ಟುಡಿಯೋ ಪತ್ತೆ ಹಚ್ಚಿ ಅವನನ್ನು ಬೇಡಿಕೊಂಡು, ಒಬ್ಬೊಬ್ಬರಾಗಿ ಹ್ಯಾಪ್ ಮೋರೆಗಳನ್ನೆ ಕ್ಯಾಮೆರಾಗೆ ಒಡ್ಡಿ ಬಂದಿದ್ದೆವು. ನಮ್ಮ ಮುಖಗಳನ್ನು ನಾವೆ ಗುರುತಿಸಲಾಗದಷ್ಟು ವಿಕಾರವಾಗಿದ್ದ ನಮ್ಮ ಭಾವ ಚಿತ್ರಗಳು ನಮ್ಮ ಕೈ ಸೇರಿದ್ದವು.

ಈ ಷಿಪ್ಪಿಂಗ ಕಾರ್ಪೋರೇಷನ್‌ನಲ್ಲಿ ಯಾರಿಂದಲೂ ಸಹಾಯ ದೊರೆಯುವುದೆಂಬ ಭರವಸೆ ಇಲ್ಲದೆ ಹೋಯಿತು.

'ನಾಳೆ ಅಕಸ್ಮಾತ್ ಹಡಗು ಹೊರಡುವುದಿಲ್ಲ ಅಂದರೆ ಮುಂದೆ ನಾವೇನು ಮಾಡಬೇಕು' – ಎಂದು ಕೇಳಿದೆ.

'ಮಾಡೋದೇನು? ಎಲ್ಲಾ ಹಾಳು ಅಂತ ತಲೆ ಮೇಲೆ ಚಪ್ಪಡಿ ಕಲ್ಲು ಎಳೆದುಕೊಂಡು ಸುಮ್ಮನಾಗುವುದು... ಇದಿರಲಿ. 29ಕ್ಕೆ ಮದ್ರಾಸಿನಿಂದ ಬೆಂಗಳೂರಿಗೆ ರೈಲ್ವೆ ಟಿಕೇಟು ಬುಕ್ ಮಾಡಿರೋದು ಹೋಗುತ್ತೇ' – ಎಂದು ಇನ್ನೊಂದು ಸಮಸ್ಯೆ ಮುಂದಿಟ್ಟಳು.

ಅಷ್ಟರಲ್ಲಿ ಯಾರೋ ಬಾಗಿಲು ತಟ್ಟಿದರು. ಎದ್ದು ಹೋಗಿ ಬಾಗಿಲು ತೆಗೆಯುವುದಕ್ಕೂ ಹೆದರಿಕೆ. 'ಮೇಡಂ, ಮೇಡಂ.. ಮಲಗಿಬಿಟ್ಟಿರಾ ಆಗಲೆ'

–ಪುರುಷೋತ್ತಂರವರ ಧ್ವನಿ ಕೇಳಿಸಿತು.

"ಇಲ್ಲ ಸಾರ್ .. ಏನಾದರೂ ಕೆಲಸ ಇತ್ತಾ?" – ಕೇಳಿದಳು ಲೀಲಾ.

'ನೋಡಿ ಕ್ಯಾಂಟೀನ್ ನಾಗರಾಜ್ ಬಂದಿದ್ದಾರೆ'– ಅವರು ಏನೊ ಮಾತಾಡಬೇಕಂತೆ.

'ಇದೇನೆ ಈ ರಾತ್ರೀಲಿ ಈ ಪಿಶಾಚಿ '– ಎಂದೆ ನಾನು.

'ಇರೆ ಏನಾದರೂ ನ್ಯೂಸ್ ಗೊತ್ತಾಗುತ್ತೆ. ನಾಳೆ ನಾವು ಹೊರಡುವುದು, ಇವರಿಂದ ಡೆಫನೆಟ್ ಮಾಡಿಕೊಳ್ಳಬಹುದು' – ಅವಳ ಮುಖದಲ್ಲಿ ತೆಳ್ಳನೆಯ ಗೆಲುವು ಕಂಡಿತು.

ನಾಗರಾಜ್ ಅವರನ್ನು ಭೇಟಿಯಾದ ಮೇಲೆ ಪರಿಸ್ಥಿತಿ ಅರ್ಥವಾಯಿತು. ನಾಳೆ ಬೆಳಿಗ್ಗೆ ರೇಡಿಯೊ ಸುದ್ದಿಯಲ್ಲಿ ಹಡಗು ಹೊರಡುವ ವೇಳೆಯನ್ನು ತಿಳಿಸುತ್ತಾರೆ. ಗಾಳಿಯ ವೇಗ ಇನ್ನೂ ತೀಕ್ಷ್ಣವಾಗಿರುವುದರಿಂದ ಏನನ್ನೂ ಹೇಳಲು ಸಾಧ್ಯವಿಲ್ಲ ಎಂದರು. ನಮ್ಮ ಷೆಡ್ಯೂಲ್ (ಪೂರ್ವ ಯೋಜಿತ) ಪ್ರಕಾರ ಮದ್ರಾಸ್ ತಲುಪದಿದ್ದರೆ ರೈಲ್ವೆ ಟಿಕೇಟುಗಳು ವ್ಯರ್ಥವಾಗುತ್ತೆ. ಅದಕ್ಕಾಗಿ ನಾಗರಾಜ್‌ರವರಿಗೆ, ಸಾಧ್ಯವಾದರೆ ಟೆಲಿಗ್ರಾಂ ಮೂಲಕ ಕ್ಯಾನ್ಸಲ್ ಮಾಡಿಸಲು ಹೇಳಿದೆವು. ಅವರೂ ಒಪ್ಪಿ ನಂತರ ತಿಳಿಸುವುದಾಗಿ ಹೇಳಿ ಬೀಳ್ಕೊಂಡರು. ಪರಿಸ್ಥಿತಿಯಲ್ಲಿ ಸುಧಾರಣೆ ಬರಲೆಂದು ಪ್ರಾರ್ಥಿಸುತ್ತಾ, ಪ್ರಾರ್ಥಿಸುತ್ತಾ ಕಣ್ಣು ಹತ್ತಿದವು.

ನಾಳೆ ಹಡಗು ಹೊರಡುವುದಿಲ್ಲ ಎನ್ನುವ ಸುದ್ದಿಗಳೆ ಸುತ್ತಿ ಸುತ್ತಿ ನಮ್ಮನ್ನು ಬೆದರಿಸಿ ಕಾಡಿದ್ದವು. ಅವು ಸುಳ್ಳಾಗಲೆಂದೆ ನಮ್ಮ ಹಾರೈಕೆ, ಆದರೆ ಈಗ ಅನ್ನಿಸಿತು. ನಮ್ಮ ಇಚ್ಛೆ, ಅನಿಚ್ಛೆಗಳ ಪ್ರಶ್ನೆಯೆ ಇಲ್ಲ. ಎಲ್ಲವೂ ಯಾವುದೊ ಒಂದು ಅಗೋಚರ ಋತಧರ್ಮಕ್ಕೆ ಅನುಗುಣವಾಗಿ ನಡೆಯುತ್ತೆ. ಅದರ ಮುಂದೆ ನಾವು ಅಲ್ಪರು – ಎನ್ನುವ ವೇದಾಂತದ ಚಿಂತನೆಯೊಂದೆ ಸಮಾಧಾನ.

26ನೆ ನವೆಂಬರ್ –ನಾವು ಹೊರಡುವ ದಿನ – ಹೊರಡುವ ಈ ಗಳಿಗೆಯ ನಿರೀಕ್ಷೆಯಲ್ಲಿಯೆ ಮೂರು ನಾಲ್ಕು ದಿನಗಳನ್ನು ಕಳೆದವು. ಯಾರೂ ಯಾರನ್ನೂ ಎಚ್ಚರಿಸಬೇಕಾಗಲಿಲ್ಲ. ನಿದ್ದೆ ಹತ್ತಿದ್ದರೆ ತಾನೇ?

ಎಲ್ಲೆಲ್ಲೂ ನೀರು– ಮಳೆನೀರು – ಸಮುದ್ರದ ನೀರು – ಆದರೆ ಹಾಸ್ಟೆಲಿನಲ್ಲಿ ನೀರಿಗೆ ಕ್ಷಾಮ ಬಂತು. ಆದರೆ ಹೇಗೊ ಒಂದಿಷ್ಟು ನೀರಿನಿಂದಲೆ ನಮ್ಮ ಕೆಲಸಗಳನ್ನು ಮುಗಿಸಿ 7.30 ಕ್ಕೆ ನಮ್ಮ ಲಗ್ಗೇಜನ್ನು ಇಳಿಸಿಕೊಂಡು ಹಾಸ್ಟೆಲ್ ಮುಂದೆ ನಿಂತೆವು. ಬೆಳಿಗ್ಗೆ 6.30ರ ರೇಡಿಯೋ ಸಮಾಚಾರದಲ್ಲಿ, ಹಡಗು ಹೊರಡುವ ಸುದ್ದಿ ಕೇಳಿದ್ದೆವು. ಅದಕ್ಕೆ ನಮ್ಮ ಮುಖಗಳಲ್ಲಿ ಗೆಲುವಿನ ಗೆರೆಗಳು ಮೂಡಿದ್ದವು. ಅಷ್ಟರಲ್ಲಿ ನಮ್ಮ ಲಗ್ಗೇಜು ಹೊರಲು ಲಾರಿಯೊಂದು ಬಂತು. ನಾಗೇಂದ್ರ, ರಾಜು ಇವರಿಗೆ ಲಗ್ಗೇಜು ತುಂಬಿಸಲು ಹೇಳಿ ಹುಡುಗರನ್ನು ಹೋಟೆಲಿಗೆ ಕರೆದೊಯ್ದೆವು.

ನಮ್ಮನ್ನು ನೋಡುತ್ತಿದ್ದಂತೆ ಮಾನಿಗಳಿಬ್ಬರು ನಕ್ಕರು. ಆ ನಗುವಿನಲ್ಲಿದ್ದ ಅರ್ಥ ನಮಗೆ ಹೊಳೆಯಲಿಲ್ಲ. 'ನಮ್ಮ ಅನ್ನಪೂರ್ಣೆಯ ಋಣ ನಿಮಗೆ ಇನ್ನೂ ತೀರಿಲ್ಲ'– ಎಂಬುದೆ ಅದರ ಅರ್ಥವಾಗಿತ್ತು. ತಿಂಡಿಗೆ ಆರ್ಡರ್ ಮಾಡುತ್ತಿದ್ದಂತೆ ರಾಜೇಶ್,

ಪುರುಷೋತ್ತಂ ಬಳಿಗೆ ಬಂದು – 'ಸಾರ್ ಈಗ ತಾನೆ ಹ್ಯಾಡೋ ಜೆಟ್ಟಿಯಿಂದ, ವಾಪಸ್ಸು ಬಂದವು ಹೇಳಿದರಂತೆ ಹಡಗು ಹೊರಡೋದಿಲ್ಲಾಂತ'– ಎಂದ.

ಹೋಗ್ರೋ, ಯಾರ್ಯಾರೋ ಹೇಳಿದ್ದನ್ನು ನಂಬಬೇಡಿ

'ವಿ ಆರ್ ಗೋಯಿಂಗ್, ಡೋಂಟ್ ವರೀ' ಎಂದರು –

ಬಂದವನಿಗೆ ಸಮಾಧಾನವಾಯಿತು. ಒಳಗೆ ನಿಜವಿರಬಹುದೆ ಎಂಬ ಅನುಮಾನವಿದ್ದರೂ, ನಮ್ಮ ಸೋಲನ್ನು ಒಪ್ಪಿಕೊಳ್ಳಲು ಮನಸ್ಸು ಸಿದ್ಧವಿರಲಿಲ್ಲ.

ಆದರೆ ವಾಸ್ತವವಾಗಿ ನಾವು ಕೇಳಿದ ಸುದ್ದಿ ಸತ್ಯವಾಗಿತ್ತು – ಎನ್ನುವುದು ನಾವು ಪೋರ್ಟ್‌ಗೆ ಹೋದಾಗಲೆ ತಿಳಿದದ್ದು. ಪ್ರವೇಶ ದ್ವಾರಗಳು ಮುಚ್ಚಿದವು. ಯಾರೂ ಇಲ್ಲದ್ದನ್ನು ನೋಡಿ, ನಮಗೆ ಆಶ್ಚರ್ಯವಾದರೂ ಹಡಗು ಹೊರಡುವುದಿಲ್ಲ – ಎನ್ನುವ ಮಾತನ್ನು ನಂಬಲು ಈಗಲೂ ಸಿದ್ಧವಿರಲಿಲ್ಲ. ನಮ್ಮ ಗುಂಪನ್ನು ನೋಡಿದ ಶ್ರೀಕಾಂತ್ ಡೆಕ್ ಮೇಲೆ ನಿಂತಿದ್ದವನು ಕೈ ಬೀಸಿದ.

'ನಾಗರಾಜು ಹೊರಗೆ ಬಂದರು. ಷಿಪ್ ಕ್ಯಾನ್ಸಲ್ ಆಗಿರುವುದು ಸತ್ಯವೆಂದರು. 'ಹೋಗಲಿ ನಾಳೆಯಾದರೂ ಹೊರಡುತ್ತಾ?' ಒಟ್ಟಿಗೆ ಕೇಳಿದೆವು.

'ಹವಾಗುಣ ಹೇಗಿರುತ್ತೆ, ಅನ್ನುವುದರ ಮೇಲಿರುತ್ತೆ. ಸುಮಾರು 600 ಕಿ.ಮೀ. ವೇಗದಲ್ಲಿ ಚಂಡ ಮಾರುತ ಬೀಸುತ್ತಿದೆ. ಸಮುದ್ರದಲ್ಲಿ ಅಲ್ಲೋಲ ಕಲ್ಲೋಲ ಉಂಟಾಗಿದೆ. ಹಡಗನ್ನು ನೀರಿಗಿಳಿಸುವುದೂ ಅಪಾಯವೆ! ನೋಡಬೇಕು ಏನಾಗುತ್ತೊ' ಎಂದರು.

ಸೋತ ಮುಖಗಳನ್ನು ಹಾಕಿಕೊಂಡು ಹಿಂತಿರುಗಿದೆವು. ಇನ್ನೂ ಪ್ರಚಂಡ ಗಾಳಿ. ಸಮುದ್ರದಲೆಗಳ ಪ್ರತಾಪನ, ಮನಸ್ಸುಗಳು ಬೇಸರದ ಮೂಸೆಗಳಾದವು. ಹೊತ್ತು ಕಳೆಯುವುದು ಹೇಗೆನ್ನುವುದೇ ಸಮಸ್ಯೆಯಾಯಿತು. ಮಳೆ ಸ್ವಲ್ಪ ಬಿಟ್ಟಿತ್ತು. ಆದರೇನು ಪೋರ್ಟ್‌ಬ್ಲೇರಿನಲ್ಲಿ ಬಂದಿಗಳಾಗಿದ್ದೆವು.

ಹುಡುಗರ ಮೇಲಿನ ಹತೋಟಿಯನ್ನು ಸಡಿಲಿಸಿ ಅವರ ಪಾಡಿಗೆ ಅವರನ್ನು ಬಿಟ್ಟೆವು. ನಾವು ಮೂವರೂ ಪೋರ್ಟ್ ಬ್ಲೇರಿನ ಮೂಲೆ ಮೂಲೆ ಸುತ್ತಿದೆವು. ಗ್ರಂಥಾಲಯಕ್ಕೆ ಹೋಗಿ ಅಂಡಮಾನ ಇತಿಹಾಸ ಓದಿದೆವು. ಮ್ಯಾಗಜೀನ್ಸ್ ತಿರುವಿ ಹಾಕಿದೆವು. ಸಂಜೆಯಾಗುತ್ತಲೆ ನೇತಾಜಿ ಸ್ಟೇಡಿಯಮ್, ಅಬೆರ್‌ಡೀನ್ ಬೀಚ್–ಇಷ್ಟೇ, ಕಾಲ ಕಳೆಯಲು ದೊರೆತ ಜಾಗಗಳಾದವು.

ರೇಡಿಯೋಗೆ ಕಿವಿ ಹಚ್ಚಿ ಕೂರುವುದು. ಷಿಪ್ಪಿಂಗ್ ಕಾರ್ಪೋರೇಷನ್ ಆಫೀಸಿಗೆ ಹೋಗಿ, ಮ್ಯಾನೇಜರ್ ಮತ್ತು ಪೈಲಟ್ ಆಫೀಸರುಗಳನ್ನು ಮಾತನಾಡಿಸಿ ನಮ್ಮ ಆತಂಕವನ್ನು ತೋಡಿ ಕೊಳ್ಳುವುದು, ನಾಳೆಹೊರಡುವುದೆಂಬ ಭರವಸೆ ಮಾತುಗಳನ್ನು ಅವರಿಂದ ಹೇಳಿಸುವುದು ಇಷ್ಟೇ ಕೆಲಸವಾಯಿತು!

ಅವರೆಲ್ಲರಿಗೂ ಕಾಲೇಜಿನ ವಿದ್ಯಾರ್ಥಿಗಳ ಬಗ್ಗೆ ಮತ್ತು ಅವರನ್ನು ಇಷ್ಟುದೂರ ಕಳಿಸಿರುವ ಪ್ರಾಂಶುಪಾಲರ ಬಗ್ಗೆ ಮತ್ತು ತಂದೆ ತಾಯಿಗಳಿಗೆ ಸಹಜವಾಗಿ ಉಂಟಾಗಿರಬಹುದಾದ ಕಳಂಕದ ಬಗ್ಗೆ ಸಹಾನುಭೂತಿಯೇನೊ ಇತ್ತು. ಆದರೆ ಅವರೂ ಅಸಹಾಯಕರಾಗಿದ್ದಾರೆ. ನೂರಾರು ಪ್ರಯಾಣಿಕರನ್ನು ಹೊತ್ತು ಒಯ್ಯುವಾಗ ಅಪಾಯಗಳನ್ನು ಸ್ವಾಗತಿಸಲು ಅವರ್‍ಯಾರೂ ಸಿದ್ಧವಿರಲಿಲ್ಲ.

ಪ್ರಪಂಡ ಬಿರುಗಾಳಿ, ಸುಂಟರಗಾಳಿಯಾಯಿತು. ಸಾವಿರ ಕಿಲೋಮೀಟರ್ ವೇಗದಲ್ಲಿ ಗಾಳಿಯ ಬೀಸು ಕಡಲನ್ನು ಕಲಕಿ ಅಲ್ಲೋಲ ಕಲ್ಲೋಲ ಮಾಡಿದೆ. ಸಮುದ್ರದಲ್ಲಿ ಭಯಂಕರ ಒತ್ತಡ, ಹಡಗು ಮಾರ್ಗದಲ್ಲಿ ಮೃತ್ಯುಕೂಪಗಳಾಗಿ ತೀವ್ರಗತಿಯ ಸುಳಿಗಳುಂಟಾಗಿವೆ. ದಿನ ದಿನಕ್ಕೆ ಪರಿಸ್ಥಿತಿ ಪ್ರಕೋಪಕ್ಕೇರುತ್ತಿದೆ.

ಪೋರ್ಟ್‌ಬ್ಲೇರ್‌ನ ಬದುಕು ಸ್ತಬ್ಧವಾಗಿದೆ. ಎಲ್ಲಿರುವವರು ಅಲ್ಲಲ್ಲಿಯೇ ಇರಬೇಕಾಗಿದೆ. ಸಮುದ್ರದಲ್ಲಿಳಿಯುವುದು ಅಪಾಯವೆಂಬ ಫಲಕಗಳನ್ನು ಅಲ್ಲಲ್ಲಿ ನೆಟ್ಟಿದ್ದಾರೆ. ಒಂದು ದ್ವೀಪದಿಂದ ಮತ್ತೊಂದು ದ್ವೀಪಕ್ಕೆ ಹೋಗುವ ವ್ಯವಸ್ಥೆ ಅಸ್ತವ್ಯಸ್ತವಾಗಿದೆ. ದೋಣಿಗಳನ್ನು ನಿಲ್ಲಿಸಲು, ಗೂಟಕ್ಕಿಡಲು ಕಟ್ಟಿರುವ ಜೆಟ್ಟಿಗಳು (ಚಾಚು ದಂಡೆಗಳು) ಛಿದ್ರ ಛಿದ್ರವಾಗಿ, ಪರಸ್ಪರ ಸಂಚಾರ ಸ್ಥಗಿತಗೊಂಡಿದೆ. ಅಪಾಯಕ್ಕೊಳಗಾಗಿರಬಹುದಾದ ಮೀನುಗಾರರ ಪತ್ತೆ ಹಚ್ಚಲು, ರಕ್ಷಿಸಲು ಹೆಲಿಕಾಪ್ಟರುಗಳು ಆಕಾಶದಲ್ಲಿ ಅಡ್ಡಾಡುತ್ತಿವೆ.

ಅಂಡಮಾನದಾಚೆಗಿನ, ಬೇರೆ ಬೇರೆ ರಾಜ್ಯಗಳ ಜೊತೆಗೆ ಸಂಪರ್ಕವೇ ಸ್ಥಗಿತಗೊಂಡಿದೆ. ಕಲ್ಕತ್ತಾದಿಂದ ಬಂದ ಪ್ಲೇನ್‌ಗಳು ಪೋರ್ಟ್‌ಬ್ಲೇರ್‌ನ 'ಏರ್‌ಪೋರ್ಟ್' ನ್ನು ತಲುಪದೆ ಮರಳಿವೆ. ಅಂಚೆ ವ್ಯವಸ್ಥೆ ಇಲ್ಲ. ತಂತಿ ಕೊಡಲೂ ಆಗುತ್ತಿಲ್ಲ.

26ಕ್ಕೆ ಹೊರಡಬೇಕಾಗಿದ್ದ ಹಡಗು 27-28 ಕ್ಕೂ ಹೊರಡಲಿಲ್ಲ. ಬೆಳಿಗ್ಗೆ ಸುದ್ದಿ ಹೊರಡುವುದೆಂದಿದ್ದರೆ, ಮರುಗಳಿಗೆಯೆ ವಿಶೇಷ ಸುದ್ದಿಯಲ್ಲಿ, ಹಡಗು ರದ್ದಾಗಿದೆ ಎಂಬ ಸೂಚನೆ!

ನಮ್ಮ ಮೇಲಿನ ಸಹಾನುಭೂತಿಯಿಂದಾಗಿ ಮತ್ತು ಕ್ಷಣ ಕ್ಷಣಕ್ಕೂ ಬದಲಾಗುತ್ತಿರುವ ನಿರ್ಧಾರಗಳಿಂದಾಗಿ ನಮಗುಂಟಾಗಬಹುದಾದ ತೊಂದರೆ ಗಮನಿಸಿ, ಷಿಪ್ಪಿಂಗ್ ಕಾರ್ಪೋರೇಷನ್‌ನ ಮ್ಯಾನೇಜರು, ತಾವೆ ಖುದ್ದಾಗಿ ಬಂದು , ಹಡಗು ಹೊರಡುವುದನ್ನು ತಿಳಿಸುವವರೆಗೆ ನೆಮ್ಮದಿಯಾಗಿ ಇರಲು ಹೇಳಿ ಹೋದರು. ಅವರ ಅಂತಸ್ತು, ಅಧಿಕಾರ ಏನು? ಆದರೂ ಆತನಲ್ಲಿನ ಮಾನವೀಯತೆ ಸಹಾನುಭೂತಿಗಳು ನಮ್ಮನ್ನು ಚಕಿತಗೊಳಿಸಿದವು.

ಈ ಮಧ್ಯೆ ನನ್ನ ಗೆಳತಿಗೆ ಹೊಸ ಯೋಜನೆ ಹೊಳೆದಿತ್ತು. ಹೇಗಾದರೂ ಮಾಡಿ ಯಾರಾದರೂ ಒಬ್ಬರು ಫ್ಲೈಟ್ ನಲ್ಲಿ ಹೋಗಿ, ಸುದ್ದಿ ಮುಟ್ಟಿಸುವುದು - ಅದೂ ಏನು!! ನಾವೆಲ್ಲಾ ಸುರಕ್ಷಿತವಾಗಿದ್ದೇವೆ, ಹಡಗು ತಡವಾಗಿ ಹೊರಡುವುದರಿಂದ, ಬರಲು ವಿಳಂಬವಾಗುತ್ತದೆ, ಗಾಭರಿ ಬೇಕಿಲ್ಲ! ಎಂದು ತಿಳಿಸುವುದು.

ಆದರೆ ಏರ್ ಟಿಕೆಟ್ಸ್ ಸಿಗಬೇಕಲ್ಲ ! ಕಮಿಷನರ್ ಅನ್ನು ನೋಡಿ, ಅವರ ಶಿಫಾರಸಿನ ಮೇಲೆ ಏರ್‌ಪೋರ್ಟ್ ಅಧಿಕಾರಿಗಳೊಬ್ಬರನ್ನು ಕಂಡು, ನಮ್ಮ ಗಂಭೀರ ಪರಿಸ್ಥಿತಿ ಏನೆಂಬುದನ್ನು ವಿವರಿಸಿ, ವಿ.ಐ.ಪಿ. ಗಳಿಗಾಗಿ ಕಾದಿರಿಸಿರುವ ಟಿಕೇಟುಗಳಲ್ಲಿ ಎರಡನ್ನು ನೀಡಲು ಒಪ್ಪಿಗೆ ಪಡೆದು ಬಂದೆವು. ಆದರೇನು ? ಪ್ಲೈಟ್ಸ್ ಕೂಡಾ ಕ್ಯಾನ್ಸೆಲ್ ನಮ್ಮ ವಿಧಿಯನ್ನು ಹಳಿಯುತ್ತಾ ಕೊರಗಿದೆವು. ಮಳೆ ಇಲ್ಲದಿದ್ದರೂ 'ಡಿಪ್ರೆಶನ್' ಇತ್ತು. ಪೂರ್ಣವಾಗಿ ಹಡಗು ಮಾರ್ಗ ನಿರಾತಂಕಗೊಳ್ಳುವವರೆಗೂ, ಸುಳಿಗಳಿಂದ ಮುಕ್ತವಾಗುವವರೆಗೂ, ಚಂಡ ಮಾರುತ ನಾರ್ತ್‌ವೆಸ್ಟ್ ಕಡೆಗೆ ಧಾವಿಸುವ ವರೆಗೂ ಹಡಗು ನೀರಿಗಳಿಯುವುದಿಲ್ಲ – ಇದೇ ಎಲ್ಲರ ನಿಷ್ಟುರ ನಿರ್ಧಾರವಾಗಿತ್ತು.

ಈ ಮಧ್ಯೆ ನಮ್ಮ ಬೇಸರವನ್ನು ಕಳೆಯಲು, ಹತ್ತಿರದಲ್ಲಿಯೇ ಇದ್ದ ಕಾಲೇಜಿಗೆ ಬೇಟಿಕೊಟ್ಟೆವು. ಮಳೇ ಬಿರುಗಾಳಿಗಳಿಂದಾಗಿ, ಕಾಲೇಜಿನ ಲ್ಯಾಬೊರೇಟರಿಯ ಗಾಜಿನ ವಸ್ತುಗಳು, ಕಾಲೇಜಿನ ಕೆಲವು ಕಿಟಕಿ ಗಾಜುಗಳು ಪುಡಿ ಪುಡಿಯಾಗಿದ್ದವು. ಭಯಂಕರ ಗಾಳಿ ಮಳೆಗಳಿಂದಾಗಿ  ಕಾಲೇಜಿಗೆ ರಜೆ ಇತ್ತು. ರಸ್ತೆಯಲ್ಲಿ ನಡೆಯುತ್ತಿದ್ರೆ ಗಾಳಿಯಲ್ಲಿ ತೇಲಿ ಹೋಗುವಂತಾಗುತ್ತಿತ್ತು. ಎದುರಿನ ಸಮುದ್ರದಲ್ಲಿ ಅಲೆಗಳೆದ್ದು ಅಪ್ಪಳಿಸುವುದರಿಂದ ನೊರೆ ಬೆಟ್ಟಗಳೆ ನಡೆದು ಬಂದಂತಾಗುತ್ತಿತ್ತು. ಉದ್ರಿಕ್ತ ಅಲೆಗಳು ಕಟ್ಟೆಯ ಸಂಕೋಲೆಗಳನ್ನು ಒಡೆದು ನಡು ರಸ್ತೆಗೂ ನುಗ್ಗಿದವು. ಎಲ್ಲಿ ಕೊಚ್ಚಿಕೊಂಡ ಏನಾಗುತ್ತೇವೊ ಎಂದು ಹೆದರಿಕೆಯಾದರೂ ಸಾಹಸದಿಂದ ನಡೆದು ಕಾಲೇಜು ತಲುಪಿ, ಅಲ್ಲಿದ್ದ ಪ್ರಾಂಶುಪಾಲರು ಮತ್ತು ಉಪನ್ಯಾಸಕರನ್ನು ಮಾತನಾಡಿಸಿಕೊಂಡು ಬಂದೆವು. ಜೀವ ಶಾಸ್ತ್ರ ವಿಭಾಗದ ಪ್ರಯೋಗ ಶಾಲೆ ನಿಜವಾಗಿಯೂ, ನೋಡಲು ಯೋಗ್ಯವಾಗಿತ್ತು. ಸಮುದ್ರ ಜೀವಿಗಳಲ್ಲಿನ ವಿವಿಧ, ಜಾತಿ ವರ್ಗಗಳನ್ನು ಅತ್ಯಂತ ವೈಜ್ಞಾನಿಕವಾದ ರೀತಿಯಲ್ಲಿ ರಕ್ಷಿಸಿ, ಸಂಗ್ರಹಿಸಿ ಗಾಜಿನ ಸೀಸೆಗಳಲ್ಲಿ ಪ್ರದರ್ಶಿಸಿದ್ದರು. ಅವುಗಳ ವಿವರ ಬರೆದು ಕೊಂಡು, ಪರಸ್ಪರ ಸ್ನೇಹ ವಿನಿಮಯ ಮಾಡಿಕೊಂಡು ನಮಸ್ಕಾರ ಹೇಳಿ ಹೊರಟು ಬಂದೆವು.

### ಅಂತೂ ಇಂತೂ ಹೊರಟಿತು ಹಡಗು:–

ಹಿಂದಿನ ಮೂರು ದಿನಗಳಿಂದಾದ ಅನುಭವದಿಂದ ಈ ದಿನ ಅಂದರೆ, 29ನೇ ನವೆಂಬರ್ ಕೂಡ ನಮ್ಮಲ್ಲಿ ಲವಲವಿಕೆ ಮೂಡಿಸಲಿಲ್ಲ. ನಮ್ಮ ಪ್ರಯಾಣದ ವಿಚಾರದಲ್ಲಿ, ನಿರಾಸಕ್ತರಾಗಿ ಉಳಿದೆವು. ಹೊತ್ತು ಹೊತ್ತಿಗೆ ತಿನ್ನುವುದು, ಅಲೆಯುವುದು ಅಷ್ಟೆ! ಸೋತು ಸೊರಗಿದ ಮುಖಗಳನ್ನು ಹಾಕಿಕೊಂಡು ಹುಚ್ಚರಂತೆ ಅಲೆಯುವ ನಮ್ಮ ಬಗ್ಗೆ ಜನ ಮನಸ್ಸಿನಲ್ಲಿಯೆ ಅಯ್ಯೋ ಪಾಪ! ಎಂದು ಉಸಿರ್ಗರೆದಿರಬೇಕು. ಹಣದ ಮುಗ್ಗಟ್ಟು ಬೇಸರಗಳಿಂದ ಒಂದೆರಡು ಸಲ ಹೋಟೆಲ್ ಭೇಟಿಯನ್ನು ತಪ್ಪಿಸಿದೆವು. ಆದರೆ ಮಾನಿಗಳೆ ನಮ್ಮನ್ನು ಹುಡುಕಿಕೊಂಡು ಬಂದು ಹಣ ಬೇಕಾದರೆ, ತಮ್ಮಲ್ಲಿ ಇರುವ ತಲಾ 500/– ರೂ. ಗಳಂತೆ ಕೊಡಲು ಮುಂದಾದರು. ಹಾಗೆಯೆ ನಾಗರಾಜ್‌ರವರೂ ಹಣದ ಅವಶ್ಯಕತೆ ಬಿದ್ದಲ್ಲಿ ಸಂಕೋಚ ಪಡೆದೆ ತಮ್ಮಿಂದ ಪಡೆಯಬೇಕೆಂದು ಒತ್ತಾಯಿಸಿದರು. ಅವರೆಲ್ಲರ

ಔದಾರ್ಯಕ್ಕೆ ನಮ್ಮ ಹೃದಯ ತುಂಬಿ ಬಂತು. ಖಂಡಿತವಾಗಿಯೂ ಅಗತ್ಯಬಿದ್ದಲ್ಲಿ ತೆಗೆದುಕೊಳ್ಳುವೆವೆಂದು ಸೌಜನ್ಯಕ್ಕೆ ಹೇಳಿದೆವಾದರೂ, ನಮ್ಮ ನಮ್ಮಲ್ಲಿದ್ದ ಹಣದಿಂದಲೇ, ಸಂಯಮದಿಂದ ನಿರ್ವಹಿಸಿಕೊಂಡೆವು.

ಈ ದಿನವಾದರೂ ಕೊನೆಯ ಬ್ರೇಕ್ ಫಾಸ್ಟ್ ಆಗಲೆಂದು ಹಾರ್ಯೆಸಿ ಹೋಟೆಲಿಗೆ ಹೋದೆವು. ತಿಂಡಿ ತಿಂದು ಹಿಂತಿರುಗಿ ಬರುವಷ್ಟರಲ್ಲಿ ಹಾಸ್ಟೆಲಿನ ಕೌಂಟರಿನಲ್ಲಿದ್ದ 'ತಂಬಿ' ಒಂದು ಸಂತೋಷದ ಸುದ್ದಿ ಹೇಳಿದ. 11 ಗಂಟೆಗೆ ಹಡಗು ಹೊರಡುತ್ತದೆ. 10 ಗಂಟೆ ವೇಳೆಗೆ ರಿಪೋರ್ಟ್ ಮಾಡಿಕೊಳ್ಳಬೇಕೆಂದು 'ಷಿಪ್ಪಿಂಗ್ ಕಾರ್ಪೊರೇಷನ್ ಮ್ಯಾನೇಜರ್ ಇಸ್ಸಾರ್ ಅವರೆ ಖುದ್ದಾಗಿ ಬಂದು ಹೇಳಿ ಹೋಗಿದ್ದರಂತೆ! ನಮ್ಮ ಸಂತೋಷಕ್ಕೆ ಪಾರವೆ ಇಲ್ಲ. ನಿಂತಲ್ಲಿ ನಿಲ್ಲಲಾಗದೆ ಎದ್ದು ಕುಣಿಯಬೇಕೆಂದೆನಿಸಿತು. ಆಗಲೆ ರೆಕ್ಕೆ ಹಚ್ಚಿಕೊಂಡು, ಹಾರಿ ಹಡಗು ಹತ್ತಿ ಕೂರಬೇಕೆನಿಸಿತು. ಆದರೂ ಎಲ್ಲರ ಮನಸ್ಸಿನ ಮೂಲೆಯಲ್ಲೆಲ್ಲೊ ಸಣ್ಣಗೆ ಒಂದು ಸಂಶಯ ನುಸುಳಿತು. ನಿಜವಾಗಿಯೂ ಹೋಗುತ್ತಿದ್ದೇವೆಯೆ? –ಎಂದು !! ಇದನ್ನೆ ಕೇಳಿದರು, ಹುಡುಗರೆಲ್ಲರೂ !!

ಇನ್ನು ನಿರಾಶೆಯಾಗಲಾರದು ನಿನ್ನೆಯ ದಿನದ ನಮ್ಮ ಹರಕೆ ಪೂಜೆಗಳು ಪೊಳ್ಳಾಗಲಾರವು (ಹಿಂದಿನ ದಿನ ಅಬರ್ ಡೀನ್ ಚೌಕದಲ್ಲಿರುವ ಗಣೇಶನಿಗೆ ಅರ್ಚನೆ ಆರತಿಗಳನ್ನು ಮಾಡಿಸಿದ್ದೆವು) ಎನಿಸಿ ಮತ್ತೆ ವ್ಯಾನ್‌ನ ವ್ಯವಸ್ಥೆ ಮಾಡಿ ಹ್ಯಾಡೋ ಜೆಟ್ಟಿಯತ್ತ ಸಾಗಿದೆವು.

ಬೇಕಾದಷ್ಟು ಜನ ಸಂದಣಿಯಿತ್ತು. ಎಲ್ಲರ ಮೆಡಿಕಲ್ ಸರ್ಟಿಫಿಕೇಟ್ ಮಾಡಿಸಿ ಬಂದದ್ದಾಯಿತು. ಹತ್ತುವಾಗ ನೂಕು ನುಗ್ಗಲಾದರೆ ನಮ್ಮ ನಮ್ಮ ಲಗೇಜಿನೊಂದಿಗೆ ಒಳಗೆ ಹೋಗುವುದು ಹೇಗೆ ಅನಿಸಿ, ಹಡಗಿನಲ್ಲಿನ ನಮ್ಮ ಸ್ನೇಹಿತರನ್ನು ಕೇಳಿಕೊಂಡಾಗ ಭರವಾದ ಕೆಲವು ವಸ್ತುಗಳನ್ನು ಹುಡುಗರ ಮೂಲಕ ಮೊದಲೆ ಒಳಗೆ ಕಳಿಸುವ ಅವಕಾಶ ಕಲ್ಪಿಸಿದರು. ಹಾಗೆಯೆ ಅವರು ಅಲ್ಲಿಯೆ ಉಳಿದು ಸ್ಥಳಗಳನ್ನು ಕಾಯಲೂ ಅವರೆ ಹೇಳಿದರು. ಸದ್ಯಕ್ಕೆ ನಮ್ಮ ಸೀಟಿಗಳ ಸಮಸ್ಯೆ ದೂರವಾಯಿತು.

ಕ್ಯೂ ಮೂಲಕವೇ ನಾವೂ ಹತ್ತಿದೆವು. ಈ ಸಲದ ಪ್ರಯಾಣಿಕರು ಸಂಖ್ಯೆಯಲ್ಲಿ ಹೆಚ್ಚಿದ್ದರು. ಮೊದಲಿಗಿಂತ ಗಿಜಿ ಗಿಜಿ. ಹೆಜ್ಜೆ ಇಡುವುದಕ್ಕೂ ಜಾಗವಿಲ್ಲದಂತೆ ಜನ ಆಕ್ರಮಿಸಿಕೊಂಡು ಬಿಟ್ಟಿದ್ದರು.

ಗೂಟ ಬಿಚ್ಚಿತು. ಎರಡು ಟಗ್ಗರ್‌ಗಳು ಬಂದವು. ನಮ್ಮ ಹಡಗಿನ ಮೂಗಿಗೆ ಬಿಗಿದ ಹಗ್ಗವನ್ನು ಎಳೆದುಕೊಂಡು ಒಂದಷ್ಟು ದೂರ ಬಲಶಾಲಿಗಳು ನಡೆದವು. ನಿಧಾನವಾಗಿ, ಗಂಭೀರವಾಗಿ, ಭಾರವಾದ ಹೆಜ್ಜೆಗಳಿಟ್ಟು ನಡೆಯುವ ಮದುವಣಗಿತ್ತಿಯಂತೆ ನಮ್ಮ ಹಡಗು ಚಲಿಸಿತು. ಆಗಲೆ ವ್ಯತ್ಯಾಸ ನಮ್ಮ ಅನುಭವಕ್ಕೆ ಬಂತು. ಈಗ ತಾನೆ ಕಡಲನ್ನು ಕಲಕಿ ಉತ್ಪಾತಗಳನ್ನುಂಟು ಮಾಡಿ ಸರಿದಿದ್ದ ಸುಂಟರಗಾಳಿಯ ಪ್ರಭಾವದಿಂದ ಪೂರ್ತಿಯಾಗಿ ಸಮುದ್ರ ಮುಕ್ತವಾಗಿರಲಿಲ್ಲ. ಒಳಗಿನ ಒತ್ತಡ, ಮತ್ತು ಅಲೆಗಳಿಂದಾಗಿ ಹಡಗಿನ ತೂಗಾಟ

ಹೆಚ್ಚಾಗಿತ್ತು. ನಡೆಯುವುದಕ್ಕೆ ಆಗುತ್ತಿರಲಿಲ್ಲ. ಎದ್ದರೆ ಜೋಲಿ ತಪ್ಪಿ ಬೀಳುವಂತಾಗುತ್ತಿತ್ತು. ಇದರಿಂದಾಗಿ ಹೊಟ್ಟೆಯಲ್ಲಿ ತೊಳಸು, ವಾಂತಿ. ಈ ಸಲ ಹಡಗು ಹೊಲಸೆದ್ದು ಹೋಯಿತು. ತಾಜಾ ಸಮುದ್ರದ ಗಾಳಿ ಕುಡಿಯಲು ಅವಕಾಶವಿದ್ದ ಡೆಕ್ಕುಗಳಲ್ಲೂ ಎಲ್ಲೆಲ್ಲೂ ವಾಂತಿ. ಹುಡುಗರ ಜೊತೆಗೆ ನಾನೂ ಸಿಕ್‌ಲಿಸ್ಟ್ ಸೇರಿದೆ. ಊಟ ತಿಂಡಿಗಳು ಬೇಡವಾದವು.

ಅಸ್ವಸ್ಥತೆಯ ಜೊತೆಗೆ ಹೃದಯ ಭಾರವಾಗಿತ್ತು. ಆತ್ಮೀಯ ಗೆಳೆಯರೊಬ್ಬರ ಪ್ರೀತಿ, ಔದಾರ್ಯಗಳ, ಅತಿಥಿ ಸತ್ಕಾರಗಳ ಸವಿಯುಂಡು ತಣಿದ ಮನಸ್ಸಿಗೆ ಅವರಿಂದ ಬೀಳ್ಕೊಳ್ಳುವಾಗ ಉಂಟಾಗುವ ಭಾವನೆಯೇ ನನ್ನ ಮನಸ್ಸಿಗಾಯಿತು. ತಲೆತುಂಬ ನೆನಪುಗಳ ಹೊರೆ; ಹೃದಯ ತುಂಬ ಭಾವನೆಗಳ ತೊರೆ; ಕಣ್ತುಂಬ ಆ ಅಂಡಮಾನದ ಕಡಲ ದಂಡೆಗಳು; ಕಡಲ ನೀಲಿ ಬಾನ ನೀಲಿಗಳ ಸೊಗಸು; ಅಚ್ಚ ಹಸಿರು ಗುಡ್ಡಗಳು ... ಅವುಗಳ ಅಕ್ಷಯ ಸೌಂದರ್ಯದ ಕನಸುಗಳು ತೇಲುತ್ತಿದ್ದವು.

ಹಡಗು ಕದಲುತ್ತಿದ್ದಂತೆ ನಮ್ಮ ಸೀಟುಗಳ ಬಳಿಯ ಬೃಹತ್ ಕಿಟಕಿಯೊಂದರಿಂದ ಹೊರಗೆ ಮುಖವಿಟ್ಟು ಕಟ್ಟ ಕಡೆಯ ನಿಸರ್ಗ ದೇಗುಲ ದರ್ಶನ ಪಡೆದೆ. ನನ್ನ ಕೊನೆಯ ವಿದಾಯ ಹೇಳಿದೆ. ತೆಂಗು, ಕೌಂಗುಗಳು ತೋಳ ಬೀಸಿ ನಕ್ಕು ಬೀಳ್ಕೊಟ್ಟವು. ಅಂಡಮಾನದ ಆಕಾಶದಲ್ಲಿ ನನ್ನ ನೆನಪಿನ ಮಲ್ಲಿಗೆಗಳು ಚಿಕ್ಕೆಗಳಾಗಿ ಅರಳಿ ಹೊಳೆಯುತ್ತಿರಲೆಂದು ಬಯಸಿದೆ.

ಅಗಲಿಕೆಯ ವೇದನೆ ಯಾರಿಗೂ ಅರ್ಥವಾಗಲಾರದು ಎಂದುಕೊಂಡೆ. ನಿಧಾನ..ನಿಧಾನವಾಗಿ ಸಾಗುತ್ತ ನಮ್ಮ ಹಡಗು ದೂರ... ದೂರ.. ದೂರವನ್ನು ಕ್ರಮಿಸುತ್ತಿತ್ತು. ನಮ್ಮ ಯಾವ ಭಾವನೆಗಳಿಗೂ ಸ್ಪಂದಿಸದೆ ತನ್ನ ಪಾಡಿಗೆ ತಾನು ಅಲೆಗಳೊಡನಾಟದಲ್ಲಿ ತೂಗುಯ್ಯಾಲೆಯಾಡುತ್ತಾ ನಮಗೆ ಜೋಗುಳ ಹಾಡುತ್ತ ತನ್ನ ಗಮ್ಯದತ್ತ ಸರಿಯುತ್ತಿತ್ತು.

ಮತ್ತೆ ಮರಳಿ ಯಾಂತ್ರಿಕ ಬದುಕಿನ ಪ್ರವಾಹದಲ್ಲಿ ಮುಳುಗೇಳುತ್ತಲೆ ಈ ನೆನಪುಗಳ ಕಾಮನಬಿಲ್ಲಿನಾಕರ್ಷಣೆಗೆ ಕ್ಷಣವಾದರೂ ನಿಂತು ಅನುಭವಿಸಬಲ್ಲೆನೇ? - ಎನಿಸಿತು.

ಇದಾವುದರ ಆಲೋಚನೆಗಳಿಲ್ಲದೆ ಹುಡುಗರು ಅವರವರ ಸಂಭ್ರಮ ಉಲ್ಲಾಸಗಳಲ್ಲಿ ಕಳೆದುಹೋಗಿದ್ದರು. 'ಹಾಯ್ ಜೀವವೆ!' ಎಂದು ನಿಟ್ಟುಸಿರಿಟ್ಟೆ.

* * * * *

